ಮರಣವಿದು ಎಲ್ಲರಿಗೂ ಕಡ್ಡಾಯವೆಂಬ ವಿಷಯವನ್ನು ತಿಳಿಸುತ್ತಾ ಪಾಪಿಯಾದ ಜೀವನನ್ನು ಸಸ್ಯದಂತೆ ಕುಂಭೀ ಎಂಬ ನರಕದಲ್ಲಿ ಹಾಕಿ ಪಾಕ ಮಾಡುತ್ತಾರೆ. ಅರ್ಥಾತ್ ಬೇಯಿಸುತ್ತಾರೆ. ಜೀವನ ಪಾಪವು ಕಳೆದು ಹೋದಮೇಲೆ ಪಾಪಶೇಷದಿಂದ ಮತ್ತೆ ಭೂಲೋಕದಲ್ಲಿ ಸಸ್ಯದಂತೆ ನಿರ್ದಿಷ್ಟವಾದ ಸ್ಥಳದಲ್ಲಿ ಜನಿಸುತ್ತಾನೆ.

ಆದರೆ ಈ ತರಹದ ನಿರಯಭೋಗ ಮರ್ತ್ಯರಿಗೆ ಮಾತ್ರ. ದೇವತೆಗಳಿಗೆ ಇರುವದಿಲ್ಲ. ಈ ವಿಷಯವನ್ನು ಈ ಮಂತ್ರದಲ್ಲಿಯ ''ಮರ್ತ್ಯ'' ಎಂಬ ಶಬ್ದವೆ ಸೂಚಿಸುತ್ತದೆ.

**ವೈಶ್ವಾನರಃ ಪ್ರವಿಶತ್ಯತಿಥಿಃ ಬ್ರಾಹ್ಮಣೋ ಗೃಹಾನ್ ।**
**ತಸ್ಯೈತಾಂ ಶಾಂತಿಂ ಕುರ್ವಂತಿ ಹರ ವೈವಸ್ವತೋದಕಮ್ ॥೧.೧.೭॥**

ನಚಿಕೇತ ತಂದೆಯ ಶಾಪಕ್ಕೆ ಅನುಗುಣವಾಗಿ ಮೃತನಾಗಿ ಯಮನ ಪಟ್ಟಣವನ್ನು ತಲುಪಿದ. ಯಮನ ಮನೆಗೆ ಹೋದ. ಬಂದ ಬ್ರಾಹ್ಮಣನಿಗೆ ಅತಿಥಿಸತ್ಕಾರವನ್ನು ಮಾಡಲು ಶ್ಯಾಮಲಾದೇವಿ ಮುಂದಾದಳು. ಆದರೆ ಪುರುಷರಿಲ್ಲದ ಮನೆಯನ್ನು ಪ್ರವೇಶಮಾಡಬಾರದೆಂದು ಯೋಚಿಸಿದ ನಚಿಕೇತ. ಯಮ ಬರುವವರೆಗೂ ಸುಮ್ಮನೆ ಕುಳಿತ. ಯಮ ಬಂದಮೇಲೆ ಶ್ಯಾಮಲಾದೇವಿ ಪತಿಯನ್ನು ಕುರಿತು ಈ ರೀತಿಯಾಗಿ ಮಾತನಾಡಿದಳು.

ಸ್ವಾಮಿನ್ ! ಬ್ರಾಹ್ಮಣನಾದ ಅತಿಥಿ ಅಗ್ನಿಗೆ ಸಮಾನ. ಅಗ್ನಿಯನ್ನು ಸರಿಯಾಗಿ ನೋಡಿಕೊಳ್ಳದಿದ್ದರೆ ಹೇಗೆ ದಾಹಕವಾಗುತ್ತದೋ ಹಾಗೆಯೆ ಬ್ರಾಹ್ಮಣನಾದ ಅತಿಥಿಯನ್ನು ಉಪಚರಿಸದಿದ್ದರೆ ಯಜಮಾನನ ಪುಣ್ಯವನ್ನೆಲ್ಲ ದಹಿಸಿಬಿಡುತ್ತಾನೆ. ಆದ್ದರಿಂದ ಅರ್ಘ್ಯ ಮೊದಲಾದ ಉಪಚಾರಗಳಿಂದ ಅವನನ್ನು ಶಾಂತಗೊಳಿಸಬೇಕು. ಆ ಕಾರ್ಯವನ್ನು ಮೊದಲು ಮಾಡಿರಿ. ಮೂರುದಿನ ಉಪವಾಸದಿಂದ ಇದ್ದಾನೆ. ವಿಶೇಷವಾದ ಉಪಚಾರದಿಂದ ಅವನನ್ನು ಶಾಂತಗೊಳಿಸಬೇಕೆಂದು ಶ್ಯಾಮಲಾದೇವಿ ಪ್ರಾರ್ಥಿಸಿದಳು.

**ಆಶಾಪ್ರತೀಕ್ಷೇ ಸಂಗತಂ ಸೂನೃತಾಂ ಚ**
**ಇಷ್ಟಾಪೂರ್ತೇ ಪುತ್ರಪಶೂಂಶ್ಚ ಸರ್ವಾನ್ ।**
**ಏತದ್ ವೃಂಕ್ತೇ ಪುರುಷಸ್ಯಾಲ್ಪಮೇಧಸೋ**
**ಯಸ್ಯಾನಶ್ನನ್ ವಸತಿ ಬ್ರಾಹ್ಮಣೋ ಗೃಹೇ ॥ ೧.೧.೮ ॥**

ಮನೆಗೆ ಬಂದ ಅತಿಥಿಯ ಪೂಜೆಯನ್ನು ಗೃಹಸ್ಥನಾದವನು ಮಾಡಬೇಕು. ಅನ್ನಾದಿಗಳಿಂದ ಅವನನ್ನು ಉಪಚರಿಸಬೇಕು. ಆದರೆ ಇಲ್ಲಿಗೆ ಬಂದ ಈ ಅತಿಥಿ ನಾನು ಮಾಡುವ ಯಾವ ಪೂಜೆಯನ್ನೂ ಸ್ವೀಕರಿಸಲಿಲ್ಲ. ನಿಮಗಾಗಿಯೇ ಮೂರುದಿನ ಕಾಯುತ್ತಾ ಕುಳಿತಿದ್ದಾನೆ. ಬ್ರಾಹ್ಮಣನಾದ ಅತಿಥಿಯು ಊಟವಿಲ್ಲದೇ ಮಂದಭಾಗ್ಯನಾದ ಯಾವನ

ಮನೆಯಲ್ಲಿರುವನೋ ಆ ಗೃಹಸ್ಥನ ಆಸೆಗಳು ಕೈಗೂಡುವುದಿಲ್ಲ. (ಆಸೆ ಎಂದರೆ ದೊರೆಯದ ಪದಾರ್ಥವನ್ನು ಪಡೆಯಬೇಕೆಂಬ ಬಯಕೆ.) ಅವನು ಮಾಡುವ ಪ್ರತೀಕ್ಷೆಯು ವ್ಯರ್ಥವಾಗುತ್ತದೆ. (ಈ ಕಾಲದಲ್ಲಿ ಈ ಕೆಲಸವು ಕೈಗೂಡುವದೆಂದು ನಂಬಿ ಆ ಕಾಲಕ್ಕಾಗಿ ಕಾಯುತ್ತಿರುವದು ಇದು ಪ್ರತೀಕ್ಷೆ.) ಸಜ್ಜನರ ಸಮಾಗಮ ಅವನಿಗಾಗುವದಿಲ್ಲ. ಅವನಾಡಿದ ಸಾಧುವಚನಗಳು ಫಲಕಾರಿಯಾಗುವದಿಲ್ಲ. ಅಥವಾ ತನ್ನ ವಿಷಯದಲ್ಲಿ ಯಾರೂ ಸೂನೃತವಾದ ಗೌರವಯುಕ್ತವಾದ ಮಾತುಗಳನ್ನಾಡುವದಿಲ್ಲ. ಅವನು ಮಾಡಿದ ತಟಾಕನಿರ್ಮಾಣ ಮೊದಲಾದ ಪೂರ್ತರೂಪವಾದ ಕರ್ಮವು ಹಾಗು ಯಜ್ಞಮೊದಲಾದ ಇಷ್ಟರೂಪವಾದ ಕರ್ಮವು ಇಷ್ಟವನ್ನು ಈಡೇರಿಸುವದಿಲ್ಲ. ಈ ಕರ್ಮಗಳಾವೂ ಪುಣ್ಯಪ್ರದವಾಗುವದಿಲ್ಲ. ಮತ್ತು ಸುಖಸಾಧನಗಳಾದ ಪುತ್ರಮೊದಲಾದ ಸಮಸ್ತಸಂಪತ್ತು ನಷ್ಟವಾಗಿ ಹೋಗುತ್ತದೆ. ಆದ್ದರಿಂದ ಅಲ್ಪಜ್ಞಾನಿಯಾದವನು ಅತಿಥಿಸೇವೆಯನ್ನು ಅಗತ್ಯವಾಗಿ ಆಚರಿಸಬೇಕು. ಇಲ್ಲದಿದ್ದರೆ ಅವನಿಗೆ ಅನರ್ಥ.

ಜ್ಞಾನಿಗಳಾದವರು ಕೂಡಾ ಗೃಹಸ್ಥರಿಗೆ ವಿಹಿತವಾದ ಅತಿಥಿಪೂಜಾದಿರೂಪವಾದ ಕರ್ಮಗಳನ್ನು ಆಚರಿಸಲೇಬೇಕು. ಆದರೆ ಅಜ್ಞಾನಿಗಳಿಗೆ ಆಗುವಷ್ಟು ಅನರ್ಥ ಅಪರೋಕ್ಷಜ್ಞಾನಿಗಳಾದ ನಿಮಗಾಗುವುದಿಲ್ಲ. ಆದರೂ ಧರ್ಮವನ್ನು ಪಾಲಿಸಿ ಗೃಹಸ್ಥರಿಗೆ ನೀವು ಮಾರ್ಗದರ್ಶಕರಾಗಬೇಕು. ಪರಮಾತ್ಮನ ಪ್ರೀತಿಯನ್ನು ಸಂಪಾದಿಸಬೇಕು. ಆದ್ದರಿಂದ ಅತಿಥಿಪೂಜೆಯನ್ನು ಮಾಡಿ ಕೂಡಲೆ ಅವರನ್ನು ಸಂತೋಷಪಡಿಸಿರಿ ಎಂದು ಶ್ರೀಮತಿಯಾದ ಶ್ಯಾಮಲಾದೇವಿಯು ತನ್ನ ಪತಿಯಾದ ಯಮನಿಗೆ ಪ್ರಾರ್ಥಿಸಿದಳು.

ತಿಸ್ರೋ ರಾತ್ರೀರ್ಯದವಾತ್ಸೀಃ ಗೃಹೇ ಮೇ
ಅನಶ್ನನ್ ಬ್ರಹ್ಮನ್ನತಿಥಿರ್ನಮಸ್ಯಃ ॥
ನಮಸ್ತೇऽಸ್ತು ಬ್ರಹ್ಮನ್ ಸ್ವಸ್ತಿ ಮೇऽಸ್ತು
ತಸ್ಮಾತ್ ಪ್ರತಿ ತ್ರೀನ್ ವರಾನ್ ವೃಣೀಷ್ವ ॥ ೧.೧.೯ ॥

ಹೆಂಡತಿಯಾದ ಶ್ಯಾಮಲಾದೇವಿಯು ಅತಿಥಿಯ ವಿಷಯವನ್ನು ತಿಳಿಸಿದಳು. ಕೂಡಲೆ ಯಮದೇವರು ಅತಿಥಿಯನ್ನು ಅರ್ಘ್ಯಾದಿಗಳಿಂದ ವಿಶೇಷವಾಗಿ ಪೂಜಿಸಿ ನಚಿಕೇತನನ್ನು ಸಂತೋಷಗೊಳಿಸಿದರು. ಅವನೊಡನೆ ಮಾತನಾಡಲು ಪ್ರಾರಂಭಿಸಿದರು.

''ಕುಮಾರ ನೀನು ನನ್ನ ಈ ಮನೆಯಲ್ಲಿ ಎಷ್ಟು ರಾತ್ರಿಗಳ ವರೆಗೆ ವಾಸಮಾಡಿದ್ದಿ'' ಕುಮಾರ ಹೇಳಿದ. ''ಮೂರುರಾತ್ರಿಗಳ ವರೆಗೆ ವಾಸಮಾಡಿದ್ದೇನೆ'' ''ಮೊದಲನೆಯ ರಾತ್ರಿ ನೀನು ಯಾವ ಆಹಾರವನ್ನು ಸ್ವೀಕರಿಸಿದಿ'' ಎಂದು ಕೇಳಿದ. ಅದಕ್ಕೆ ಪ್ರತಿಯಾಗಿ ನಚಿಕೇತ ಹೇಳಿದ. ''ನಿನ್ನ ಪ್ರಜೆಗಳನ್ನು ನಾನು ಭೋಜನ ಮಾಡಿದೆ'' ''ಎರಡನೆಯ ರಾತ್ರಿ ಏನು ಸ್ವೀಕರಿಸಿದೆ'' ಎನಲು ''ನಿನ್ನ ಪಶುಗಳನ್ನು ಸ್ವೀಕರಿಸಿದೆ'' ಎಂದು ಹೇಳಿದ. ''ಮೂರನೆಯ

ರಾತ್ರಿ ಏನು ಸ್ವೀಕರಿಸಿದೆ'' ಎಂದು ಕೇಳಿದ. ''ನಿನ್ನ ಸಾಧುಕೃತ್ಯಗಳನ್ನು ನಾನು ಸ್ವೀಕರಿಸಿದೆ'' ಎಂದು ನಚಿಕೇತ ಹೇಳಿದ. ಇದು ಶಾಖಾಂತರೋಕ್ತವಾದ ವಿಷಯ.

ಇಷ್ಟು ಮಾತುಕತೆಯಾದ ಮೇಲೆ ಯಮ ಮೂರುದಿನ ತನ್ನ ಮನೆಯಲ್ಲಿ ಆಹಾರವನ್ನು ಸ್ವೀಕರಿಸದೇ ವಾಸಮಾಡಿದ ನಚಿಕೇತನಿಗೆ ಮೂರುವರಗಳನ್ನು ಸ್ವೀಕರಿಸಲು ಹೇಳಿದ. ''ಅತಿಥಿಯು ಸರ್ವರಿಗೂ ನಮಸ್ಕಾರಯೋಗ್ಯನಾಗಿದ್ದಾನೆ. ಅವನಲ್ಲಿ ಅತಿಥಿನಾಮಕನಾದ ಪರಮಾತ್ಮನ ವಿಶೇಷವಾದ ಸನ್ನಿಧಾನವಿರುತ್ತದೆ. ಆದ್ದರಿಂದ ನಿನಗೆ ನಮಸ್ಕಾರ. ನನಗೆ ಅನರ್ಥವಾಗುವದು ಬೇಡ. ಮಂಗಲವಾಗಲಿ'' ಎಂದು ಹೇಳಿದ.

ಶಾಂತಸಂಕಲ್ಪಃ ಸುಮನಾ ಯಥಾ ಸ್ಯಾತ್
ವೀತಮನ್ಯುರ್ಗೌತಮೋ ಮಾಽಭಿಮೃತ್ಯೋ ।
ತ್ವತ್‌ಪ್ರಸೃಷ್ಟಂ ಮಾಽಭಿವದೇತ್ ಪ್ರತೀತ
ಏತತ್ ತ್ರಯಾಣಾಂ ಪ್ರಥಮಂ ವರಂ ವೃಣೇ ॥ ೧.೧.೧೦ ॥

ಅಪ್ಪನಿಗೆ ಬೇಡವಾದ ಮಾತುಗಳನ್ನು ನಾನಾಡಿದೆ. ಹೀಗಾಗಿ ನನಗೆ ಮರಣರೂಪವಾದ ಅನಿಷ್ಟವಾಗಲಿ ಎಂದು ನಮ್ಮಪ್ಪ ಬಯಸಿದರು. ಗೋತಮಕುಲದಲ್ಲಿ ಜನಿಸಿದ ಅವರ ಆ ಬಯಕೆಯು ಶಾಂತವಾಗಬೇಕು. ನನ್ನ ಮೇಲಿನ ಕೋಪ ಇಳಿದುಹೋಗಬೇಕು. ನಿಮ್ಮ ಲೋಕದಿಂದ ತಿರುಗಿ ಹೋದಮೇಲೆ ನನ್ನನ್ನು ಗುರುತುಹಿಡಿಯಬೇಕು. ನನ್ನ ಜೊತೆ ಸ್ನೇಹದಿಂದ ಮಾತನಾಡಿಸಬೇಕು. ಒಟ್ಟಾರೆ ಅಪ್ಪನ ಸೌಮನಸ್ಯ ನನ್ನ ಮೇಲೆ ಇರಬೇಕು. ಇದು ನಾನು ಬೇಡುವ ಮೊದಲನೆಯ ವರ. ಹೀಗೆ ಕೇಳಿದ ನಚಿಕೇತ.

ಯಥಾ ಪುರಸ್ತಾತ್ ಭವಿತಾ ಪ್ರತೀತ
ಔದ್ದಾಲಕಿರಾರುಣಿರ್ಮತ್‌ಪ್ರಸೃಷ್ಟಃ ।
ಸುಖಂ ರಾತ್ರೀಃ ಶಯಿತಾ ವೀತಮನ್ಯುಃ
ತ್ವಾಂ ದದೃಶಿವಾನ್ ಮೃತ್ಯುಮುಖಾತ್ ಪ್ರಮುಕ್ತಮ್ ॥

ನಚಿಕೇತ ಕೇಳಿದ ವರವನ್ನು ಯಮ ನೀಡುತ್ತಾನೆ. ಉದ್ದಾಲಕ ಹಾಗು ಅರುಣೆಯ ಮಗನಾದ ಹೇ ನಚಿಕೇತನೆ ! ತಂದೆತಾಯಿಗಳು ನಿನ್ನನ್ನು ಸುಖವಾಗಿ ಗುರುತಿಸುತ್ತಾರೆ. ಊರಿಗೆ ಹೋಗಿ ಬಂದ ವ್ಯಕ್ತಿಯನ್ನು ಲೋಕ ಹೇಗೆ ಸ್ಪಷ್ಟವಾಗಿ ಗುರುತಿಸುತ್ತದೋ ಹಾಗೆ ಗುರುತಿಸುತ್ತಾರೆ. ಮೃತನಾಗಿ ಮತ್ತೆ ತಿರುಗಿಬಂದ ನಿನ್ನನ್ನು ನೋಡಿ ಸಂತುಷ್ಟರಾಗುತ್ತಾರೆ. ಅಪ್ಪನಿಗೆ ನಿನ್ನ ಮೇಲಿನ ಆಗ್ರಹ-ಆವೇಶ ಕೋಪ-ತಾಪಗಳೆಲ್ಲ ಶಾಂತವಾಗುತ್ತವೆ. ರಾತ್ರಿಕಾಲದಲ್ಲಿ ಸುಖವಾಗಿ ನಿದ್ರಿಸುತ್ತಾನೆ. ಅನಿಷ್ಟವಾದ ಸಂಕಲ್ಪಗಳಿಂದ ನಿವೃತ್ತನಾದವನು, ಶಾಂತಮನಸ್ಕನು ಮಾತ್ರ ಸುಖವಾಗಿ ನಿದ್ರಿಸುತ್ತಾನೆ.

ಸ್ವರ್ಗೇ ಲೋಕೇ ನ ಭಯಂ ಕಿಂಚ ನಾಸ್ತಿ
ನ ತತ್ರ ತ್ವಂ ನ ಜರಯಾ ಬಿಭೇತಿ ।
ಉಭೇ ತೀರ್ತ್ವಾ ಅಶನಾಯಾಪಿಪಾಸೇ
ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ ೧.೧.೧೨ ॥

ಎರಡನೆಯದಾಗಿ ತಾನು ಬಯಸಿದ ವರ ಮಹತ್ತ್ವದ್ದಾಗಿದೆ. ಆ ವರ ಸ್ವರ್ಗಸಾಧನವಾದ ಅಗ್ನಿಯನ್ನು ಕುರಿತದ್ದಾಗಿದೆ. ಆ ಅಗ್ನಿಯ ಜ್ಞಾನವನ್ನು ಯಮದೇವರಿಂದ ಪಡೆಯಬೇಕೆಂಬುದು ನಚಿಕೇತನ ಆಶಯ. ಇದರ ಅರಿವಿನಿಂದ ಸ್ವರ್ಗವೇ ದೊರೆಯುತ್ತದೆಂದು ತನಗೆ ಗೊತ್ತು. ಆದ್ದರಿಂದ ತಾನು ತಿಳಿದ ಆ ಸ್ವರ್ಗದ ಸ್ವರೂಪವನ್ನು ಈ ಮಂತ್ರದಲ್ಲಿ ತಿಳಿಸುತ್ತಿದ್ದಾನೆ ನಚಿಕೇತ.

ಸ್ವರ್ಗ್ಯಗ್ನಿಯ ಪರಿಚಯವನ್ನು ಆದರ ಜ್ಞಾನವನ್ನು ಪಡೆದವನು ಪ್ರಸಿದ್ಧವಾದ ಸ್ವರ್ಗಲೋಕವನ್ನು ಅನುಭವಿಸುತ್ತಾನೆ. ಅಲ್ಲಿ ಒಂದು ಮನ್ವಂತರದ ವರೆಗೆ ಸುಖವಾಗಿ ಇರುತ್ತಾನೆ. ಅಲ್ಲಿ ಯಾರ ಭಯವೂ ಇರುವುದಿಲ್ಲ. ಹಸಿವೆಯ, ತೃಷೆಯ ಬಾಧೆಯೂ ಇರುವದಿಲ್ಲ. ಆಯುಷ್ಯವನ್ನು ಹರಿಸುವ ನೀನು ಕೂಡಾ ಅಲ್ಲಿ ಇರುವುದಿಲ್ಲ. ಮನ್ವಂತರಕಾಲದ ವರೆಗೆ ಮೃತ್ಯುವಿನ ಭಯವಿಲ್ಲದೆ ವಾಸಮಾಡುತ್ತಾನೆ. ನಂತರ ಕ್ರಮವಾಗಿ ಮುಕ್ತಿಯನ್ನೆ ಪಡೆಯುತ್ತಾನೆ. ಮುಕ್ತಿಯನ್ನು ಸೇರಿದ ಮೇಲಂತೂ ಯಾವುದರ ಭಯವಿಲ್ಲದೆ ಶೋಕದ ಸಂಪರ್ಕವಿಲ್ಲದಲೆ ಸ್ವರೂಪಾನಂದವನ್ನು ಅನುಭವಿಸುತ್ತಾ ಇರುತ್ತಾನೆ. ಇಂತಹ ಸ್ವರ್ಗಕ್ಕೆ ಸಾಧನವಾದ ಅಗ್ನಿಯ ಜ್ಞಾನವನ್ನು ನನಗೆ ನೀವು ಉಪದೇಶಿಸಬೇಕು.

ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ
ಪ್ರಬ್ರೂಹಿ ತಂ ಶ್ರದ್ದಧಾನಾಯ ಮಹ್ಯಮ್ ।
ಸ್ವರ್ಗಲೋಕಾ ಅಮೃತತ್ವಂ ಭಜಂತೇ
ಏತದ್ ದ್ವಿತೀಯೇನ ವೃಣೇ ವರೇಣ ॥ ೧.೧.೧೩ ॥

"ಸ್ವರ್ಗೇ ಲೋಕೇ" ಎಂಬ ಮಂತ್ರದಿಂದ ಸ್ವರ್ಗಲೋಕವನ್ನು ಮುಖ್ಯವಾಗಿ ಸ್ವರ್ಗಶಬ್ದಿತವಾದ ಭಗವಂತನ ಲೋಕವನ್ನು ಪ್ರಶಂಸೆಮಾಡಿ "ಸ ತ್ವಮಗ್ನಿಮ್" ಎಂಬ ಮಂತ್ರದಿಂದ ಭಗವಲ್ಲೋಕಪ್ರಾಪಕವಾಗಿರುವ ಅಗ್ನಿಯ ವಿಷಯವನ್ನು ಪ್ರಶ್ನಿಸುತ್ತಿದ್ದಾನೆ ನಚಿಕೇತ.

ಸ್ವಾಮೀ ! ನೀವು ನನಗೆ ವರದಾತೃಗಳಾಗಿದ್ದೀರಿ. ಸ್ವರ್ಗಕ್ಕೆ ಸಾಧನವಾದ ಅಗ್ನಿಯನ್ನು ಅಗ್ನ್ಯಂತರ್ಯಾಮಿಯಾದ, ಅಗ್ರ್ಯತ್ವಾದಿಗುಣಗಳಿಂದ ವಿಶಿಷ್ಟನಾದುದರಿಂದ ಅಗ್ನಿನಾಮಕನಾದ ಭಗವಂತನನ್ನು ನೀವು ಚೆನ್ನಾಗಿ ತಿಳಿದುಕೊಂಡಿದ್ದೀರಿ. ಶ್ರದ್ಧಾವಿಶಿಷ್ಟನಾದ ನನಗೆ ಆ ಅಗ್ನಿಯ

ಉಪದೇಶವನ್ನು ಮಾಡಬೇಕು. ಜ್ಯೋತಿಷ್ಟೋಮಾದಿಗಳಲ್ಲಿ ಪ್ರವೃತ್ತನಾದವನಿಗೆ ಪ್ರಧಾನವಾದ ಫಲ ಮುಕ್ತಿಯೇ. ಸ್ವರ್ಗವಿದು ರೋಚಕವಾದ ಫಲವಾಗಿದೆ. ಈ ಎರಡೂ ಪ್ರಯೋಜನಗಳು ಅಗ್ನಿಯ ಜ್ಞಾನವನ್ನು ಪಡೆದವರಿಗೆ ಸಿಗುತ್ತದೆ. ಸ್ವಯಂ ರಮಣಶೀಲನಾಗಿರುವುದರಿಂದ "ಸ್ವರ್" ಎಂದರೆ ಭಗವಂತ. ಅವನಿಂದ ಗತವಾದ ಲೋಕ ಅರ್ಥಾತ್ ಅವನಿರುವ ವೈಕುಂಠಾದಿಲೋಕಗಳು ಇವುಗಳೆ ಸ್ವರ್ಗಗಳಾಗಿವೆ. ಅಂತಹ ವಿಷ್ಣುಲೋಕ ಭಗವಂತನ ಅನುಗ್ರಹದಿಂದಲೆ ಪ್ರಾಪ್ತವಾಗುತ್ತದೆಯಾದ್ದರಿಂದ ಭಗವಂತನೆ "ಸ್ವರ್ಗ್ಯಗ್ನಿ" ಎಂದು ಕರೆಯಲ್ಪಡುತ್ತಾನೆ. ಈ ಅಗ್ನಿಗಳ ಜ್ಞಾನವನ್ನು ಪಡೆಯುವದೆ ಎರಡನೆಯ ವರವೆಂದು ನಚಿಕೇತ ಕೇಳುತ್ತಾನೆ.

**ಪ್ರ ತೇ ಬ್ರವೀಮಿ ತದು ಮೇ ನಿಬೋಧ**
**ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ ।**
**ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ**
**ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಮ್ ॥೧.೧.೧೪॥**

ನಚಿಕೇತನ ಎರಡನೆಯ ವರಕ್ಕೆ ಸ್ಪಂದಿಸಿದ ಯಮದೇವರು ಉತ್ತರವನ್ನು ನೀಡಿದರು. ನಿಜ. ಸ್ವರ್ಗಸಾಧನವಾದ ಅಗ್ನಿಯನ್ನು ಕುರಿತು ನಾನು ಅಧ್ಯಯನ ಮಾಡಿದ್ದೇನೆ. ಅದನ್ನು ಅವಶ್ಯವಾಗಿ ನಿನಗೆ ಉಪದೇಶ ಮಾಡುತ್ತೇನೆ. ಕೇಳು. ನಿನಗೆ ಈಪ್ಸಿತವಾದ ವಿಷಯವಿದು. ಆದ್ದರಿಂದ ಸಾವಧಾನದಿಂದ ಕೇಳು. ಹೀಗೆಂದು ಪ್ರತಿಜ್ಞೆಯನ್ನು ಮಾಡಿ ಅಗ್ನಿಸ್ಥಿತನಾದ ಭಗವಂತನ ಸ್ವರೂಪವನ್ನು ಉಪದೇಶಿಸಲು ಪ್ರಾರಂಭಿಸಿದರು.

ಹೇ ನಚಿಕೇತ ! ನೀನು ಅಗ್ನ್ಯಂತರ್ಯಾಮಿಯಾದ ಶ್ರೀಹರಿಯ ಸ್ವರೂಪವನ್ನು ಕುರಿತು ಪ್ರಶ್ನಿಸಿದ್ದಿ. ಆ ಶ್ರೀಹರಿಯ ತತ್ತ್ವಜ್ಞಾನ ವಿಷ್ಣುಲೋಕದ ಅಂತೆಯೇ ನಿತ್ಯವಾದ, ಸದಾತನವಾದ ಲೋಕದ ಸಂಪ್ರಾಪ್ತಿಗೆ ಉಪಾಯವಾಗಿದೆ. ಅವನು ಮುಕ್ತಾಮುಕ್ತ ಸಕಲಲೋಕಗಳಿಗೆ ಆಧಾರನಾಗಿದ್ದಾನೆ. ಸ್ವರ್ಗಾಪವರ್ಗಗಳನ್ನು ಭಕ್ತರಿಗೆ ಅನುಗ್ರಹರೂಪವಾಗಿ ನೀಡುವ ಆ ಭಗವಂತ ಸಕಲರ ಹೃದಯಗುಹಾದಲ್ಲಿ ನೆಲೆಸಿದ್ದಾನೆ. ಹೀಗೆಂದು ಅವನನ್ನು ತಿಳಿ. ಭಗವಂತನೂ ಅಗ್ನಿಶಬ್ದದಿಂದ ವಾಚ್ಯನಾಗಿದ್ದಾನೆಂದು ತಿಳಿಯುವದು ಈ ಪ್ರಸಂಗದಲ್ಲಿ ಸೂಕ್ತವಾಗುತ್ತದೆ. ಭಗವಂತ ಅಗ್ನ್ಯನಾಗಿದ್ದಾನೆ. ಅರ್ಥಾತ್ 'ಅಗ್ರೇ' ಎಲ್ಲರಿಗಿಂತಲೂ ಮೊದಲಿಗೆ 'ಸ್ಥಿತ'ನಾಗಿದ್ದಾನೆ. ಸರ್ವೋತ್ತಮನಾಗಿದ್ದಾನೆ. ಈ ಕಾರಣಕ್ಕಾಗಿ ಅವನು ಅಗ್ನಿಶಬ್ದವಾಚ್ಯನಾಗಿದ್ದಾನೆ.

ವೇದೇಶೀಯವಿಶೇಷ- ಇಲ್ಲಿ "ನಿಹಿತಂ ಗುಹಾಯಾಮ್" ಎಂದರೆ ವಿದ್ವಾಂಸರ ಬುದ್ಧಿಯಲ್ಲಿ ಪ್ರವಿಷ್ಟನಾದವನು ಎಂದು ಅರ್ಥಾತ್ ವಿದ್ವಾಂಸರಿಗೆ ವಿಷಯನಾದವನು ಎಂದು ಅದ್ವೈತಿಗಳು ಹೇಳುತ್ತಾರೆ. ಇದು "ಆತ್ಮಾಸ್ಯ ಜಂತೋಃ ನಿಹಿತೋ ಗುಹಾಯಾಮ್"

ಎಂಬುವ ಉತ್ತರವಚನದಿಂದ ವಿರುದ್ಧವಾಗುತ್ತದೆ. ಅಲ್ಲಿ ಹೃದಯಗುಹಾನಿಹಿತತ್ವವನ್ನು ಉಪನಿಷತ್ತು ಪ್ರತಿಪಾದಿಸಿದೆ. ಆ ಪ್ರಸಂಗದಲ್ಲಿ ಅದ್ವೈತಿಗಳು ಕೂಡಾ ಇದೇ ರೀತಿಯಾಗಿ ವ್ಯಾಖ್ಯಾನಮಾಡಿದ್ದಾರೆ. ಆದ್ದರಿಂದ ಅದೇ ಅರ್ಥವನ್ನು ಇಲ್ಲಿ ಹೇಳುವದು ಸೂಕ್ತವಾಗುತ್ತದೆ.

ಆದರೆ ಇದು ಅಗ್ನಿಯ ಪ್ರಕರಣವಾದುದರಿಂದ "ನಿಹಿತಂ ಗುಹಾಯಾಮ್" ಎಂಬ ವಚನಕ್ಕೆ ಹೃದಯಗುಹಾನಿಹಿತ ಎಂದು ಅರ್ಥ ಹೇಳಲು ಬರುವದಿಲ್ಲ. ಅಗ್ನಿದೇವತೆ ಹೃದಯಗುಹಾನಿಹಿತನಲ್ಲ. ಹೃದಯಗುಹಾನಿಹಿತತ್ವ ಬ್ರಹ್ಮನಿಗೆ ಮಾತ್ರ ಇರುತ್ತದೆ. ಆದ್ದರಿಂದ ಪ್ರಕರಣಕ್ಕೆ ಅನುಗುಣವಾಗಿ "ವಿದುಷಾಂ ಬುದ್ಧೌ ನಿವಿಷ್ಟಮ್" ಎಂದು ಶಂಕರರು ಅರ್ಥ ಮಾಡಿದ್ದು ಸಮುಚಿತವಾಗುತ್ತದೆ. ಎಂದು ಅವರು ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳುತ್ತಾರೆ.

ನಿಜ. ಇದು ಅಗ್ನಿಪ್ರಕರಣವಾಗಿದ್ದರೆ ಆ ಅರ್ಥ ಸಮುಚಿತವಾಗುತ್ತಿತ್ತು. ಆದರೆ ಇದು ಪರಬ್ರಹ್ಮಪ್ರಕರಣವಾಗಿದೆ. ನಚಿಕೇತ ಅಗ್ನ್ಯಂತರ್ಯಾಮಿಯಾದ ಪರಮಾತ್ಮನ ವಿಷಯದಲ್ಲಿ ಪ್ರಶ್ನೆ ಮಾಡಿದ್ದಾನೆ. ಹೊರತು ಅಗ್ನಿಯ ವಿಷಯದಲ್ಲಿ ಅಲ್ಲ. ಆದ್ದರಿಂದ ಇದು ವಿಷ್ಣುಪ್ರಕರಣ. ಇಲ್ಲಿ ಅಗ್ನಿ ಎಂಬ ಶಬ್ದದಿಂದ ಮುಖ್ಯವಾಗಿ ವಾಚ್ಯನಾದವನು ಅಗ್ನಿದೇವತೆಯಲ್ಲ. ಅಗ್ನಿನಾಮಕನಾದ ಭಗವಂತ. ಹೀಗೆಂದು ಶ್ರೀಮದಾನಂದತೀರ್ಥಭಗವತ್ಪಾದರು ತಿಳಿಸಿದ್ದಾರೆ. ಆದ್ದರಿಂದ ಈ ಸಮಸ್ಯೆ ನಮಗೆ ಬರುವದಿಲ್ಲ. ಆಚಾರ್ಯರು ಹೇಳಿರುವ ಈ ಅರ್ಥ ಕಾಲ್ಪನಿಕವಲ್ಲ. ಇದಕ್ಕೆ "ಗತಿಸಾರ" ಎಂಬ ಗ್ರಂಥದ ಪ್ರಮಾಣವಿದೆ.

ಇದಲ್ಲದೆ ಅಗ್ನಿಯ ಜ್ಞಾನದಿಂದ ಅನಂತಲೋಕದ ಪ್ರಾಪ್ತಿಯನ್ನು ಅರ್ಥಾತ್ ಮುಕ್ತಿಯನ್ನು ಈ ಮಂತ್ರ ಪ್ರತಿಪಾದಿಸುತ್ತಿದೆ. ಅಗ್ನಿದೇವತೆಯ ಜ್ಞಾನದಿಂದ ಮುಕ್ತಿಯಾಗಲು ಸಾಧ್ಯವಿಲ್ಲ. ಕೇವಲ ಭಗವಂತನ ಜ್ಞಾನದಿಂದಲೆ ಮುಕ್ತಿ ಸಾಧ್ಯ. ಈ ವಿಷಯ "ತಮೇವಂ ವಿದ್ವಾನ್ ಅಮೃತ ಇಹ ಭವತಿ " ಇತ್ಯಾದಿಯಾದ ಅನೇಕ ಪ್ರಮಾಣಗಳಿಂದ ಸಿದ್ಧವಾಗಿದೆ. ಇದನ್ನು ಅವಲೋಕನ ಮಾಡಿದಾಗಲೂ ಅಗ್ನಿಶಬ್ದ ಭಗವತ್ಪರ ಎಂದು ಸಿದ್ಧವಾಗುತ್ತದೆ. ಅಗ್ನಿಶಬ್ದ ಭಗವತ್ಪರ ಎಂದಾದಮೇಲೆ "ನಿಹಿತಂ ಗುಹಾಯಾಮ್" ಎಂದರೆ ಹೃದಯಗುಹಾನಿಹಿತ ಎಂಬ ಅರ್ಥವನ್ನು ಮಾಡಲು ಯಾವ ಸಮಸ್ಯೆಯೂ ಇರುವದಿಲ್ಲ.

ಲೋಕಾದಿಮಗ್ನಿಂ ತಮುವಾಚ ತಸ್ಮೈ
ಯಾ ಇಷ್ಟಕಾ ಯಾವತೀರ್ವಾ ಯಥಾ ವಾ ।
ಸ ಚಾಪಿ ತತ್ ಪ್ರತ್ಯವದದ್ ಯಥೋಕ್ತಮ-
ಥಾಸ್ಯ ಮೃತ್ಯುಃ ಪುನರಾಹ ತುಷ್ಟಃ ॥೧.೧.೧೫॥

ನಚಿಕೇತ ಕೇಳಿದ ಪ್ರಶ್ನೆಗೆ ಯಮ ಉತ್ತರನೀಡಿದ. ಸಕಲಲೋಕಗಳಿಗೆ ಕಾರಣನಾದ, ಅಗ್ನಿಸ್ಥಿತನಾದ, ಅಗ್ನಿನಾಮಕನಾದ ಶ್ರೀಹರಿಯ ಸ್ವರೂಪವನ್ನು ನಚಿಕೇತನಿಗೆ ಉಪದೇಶ

ಮಾಡಿದ. ಇಷ್ಟಕಾಸಂಖ್ಯೆಗಳನ್ನು, ಅವುಗಳ ಪರಿಮಾಣವನ್ನು ಶಾಸ್ತ್ರ ತಿಳಿಸಿದ ಹಾಗೆ ನಚಿಕೇತನಿಗೆ ಉಪದೇಶಿಸಿದ. ಇದಲ್ಲದೆ ಮುನ್ನೂರ ಅರವತ್ತು ಇಷ್ಟಕಾಗಳಲ್ಲಿ ತತ್ತತ್ಪರಿಮಾಣ-ದಿಂದ ಸ್ಥಿತವಾದ ಭಗವಂತನ ಮುನ್ನೂರ ಅರವತ್ತು ರೂಪಗಳನ್ನು ಉಪದೇಶಿಸಿದ. ಯಮನು ಉಪದೇಶ ಮಾಡಿದ ನಂತರವೆ ನಚಿಕೇತ ಆ ವಿಷಯಗಳನ್ನು ಎಲ್ಲವನ್ನು ಯಮನಿಗೆ ಒಪ್ಪಿಸಿದ. ನಚಿಕೇತನ ಶುದ್ಧವಾದ, ವಿಷಯಪರಿಪುಷ್ಟವಾದ ಅನುವಾದವನ್ನು ಕೇಳಿ ಸಂತುಷ್ಟನಾದ ಯಮ ಮತ್ತೆ ಉಪದೇಶಿಸಲು ಪ್ರಾರಂಭಿಸಿದ.

**ವೇದೇಶೀಯವಿಶೇಷ**- ಇಲ್ಲಿಯ ''ಲೋಕಾದಿಮ್'' ಎಂಬ ಶಬ್ದಕ್ಕೆ ''ಲೋಕಾನಾಂ ಆದಿಂ ಪ್ರಥಮಶರೀರತ್ವಾತ್'' ಲೋಕದಲ್ಲಿ ಅಗ್ನಿಯು ಮೊದಲಿಗನು ಎಂದು ಶಂಕರರು ಅರ್ಥವನ್ನು ಹೇಳುತ್ತಾರೆ. ಇದು ಸರಿಯಾಗುವದಿಲ್ಲ. ಅಗ್ನಿ ಪ್ರಥಮದಲ್ಲಿ ಶರೀರವನ್ನು ಪಡೆದವನು ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಈ ಸಮಸ್ಯೆ ಇದ್ದುದರಿಂದಾಗಿ ''ಲೋಕಾದಿಮ್'' ಎಂದರೆ ಸರ್ವಲೋಕಗಳಿಗೆ ಆದಿಯಾಗಿದ್ದಾನೆ ಅರ್ಥಾತ್ ಕಾರಣನಾಗಿದ್ದಾನೆ ಮತ್ತು ಮೊದಲಿಗನೂ ಆಗಿದ್ದಾನೆ ಆದ್ದರಿಂದ ವಿಷ್ಣು ಎಂದು ಅರ್ಥಮಾಡಬೇಕು. ಈ ವಿಷ್ಣುವಿನ ಜ್ಞಾನದಿಂದ ಮುಕ್ತಿಯು ದೊರಕುತ್ತದೆ. ಈ ರೀತಿಯಾಗಿ ಅರ್ಥವನ್ನು ಹೇಳುವದು ಗತಿಸಾರವಚನಕ್ಕೆ ಅನುಗುಣವೂ ಆಗಿದೆ ಎಂದು ಆಚಾರ್ಯರು ತೋರಿಸುತ್ತಾರೆ.

''ಯಾ ಇಷ್ಟಕಾಃ'' ಎಂಬ ವಚನಕ್ಕೆ ''ಯಾ ಇಷ್ಟಕಾಃ ಶ್ರೋತವ್ಯಾಃ ಸ್ವರೂಪೇಣ ತಾಂಶ್ಚ ಉವಾಚ'' ಶ್ರೋತವ್ಯವಾದ ಇಟ್ಟಿಗೆಗಳ ಸ್ವರೂಪನ್ನು ಕೂಡಾ ನಚಿಕೇತನಿಗೆ ಯಮದೇವರು ಉಪದೇಶ ಮಾಡಿದರು ಎಂದು ಶಂಕರರು ಅಭಿಪ್ರಾಯಪಡುತ್ತಾರೆ. ಈ ಅರ್ಥ ಸರಿಯಾಗುವದಿಲ್ಲ. ಇಟ್ಟಿಗೆಗಳ ಸ್ವರೂಪ ಪ್ರತ್ಯಕ್ಷಸಿದ್ಧವಾಗಿದೆ. ಇದನ್ನು ಉಪನಿಷತ್ತು ತಿಳಿಸುವ ಕಾರಣವಿಲ್ಲ. ಆದ್ದರಿಂದ ಇಟ್ಟಿಗೆಯ ಸ್ವರೂಪವನ್ನು ತಿಳಿಯುವ ಪ್ರಶ್ನೆ ನಚಿಕೇತನದ್ದಲ್ಲ. ಆ ಉತ್ತರವನ್ನು ಹೇಳುವ ಉದ್ದೇಶವೂ ಯಮನಿಗೆ ಇಲ್ಲ. ಗುರುಶಿಷ್ಯರ ಪ್ರಶ್ನೋತ್ತರದಲ್ಲಿ ವಿಷಯವಾದದ್ದು ಇಷ್ಟಕಾಗತವಾದ ಭಗವತ್ಸ್ವರೂಪವೇ ಆಗಿದೆ. ಈ ಪ್ರಶ್ನೆ ಅಪೂರ್ವವಾದದ್ದು. ಆದ್ದರಿಂದ ''ಯಾ ಇಷ್ಟಕಾಃ ಇಷ್ಟಕಾದೇವತಾಃ'' ಎಂದು ಆ ಮಾತಿನ ಅಭಿಪ್ರಾಯವನ್ನು ಶ್ರೀಮದಾಚಾರ್ಯರು ತಿಳಿಸುತ್ತಾರೆ. ಬಹಳ ಸೊಗಸಾದ ಅರ್ಥಪೂರ್ಣವಾದ ವ್ಯಾಖ್ಯಾನವಿದಾಗಿದೆ. ''ತ್ರಯಮೇತದ್ವಿದಿತ್ವಾ'' ''ಶಾಂತಿಮತ್ಯಂತಮೇತಿ'' ಇತ್ಯಾದಿ ಮುಂದಿನ ವಚನಗಳಿಂದ ''ಯಾ ಇಷ್ಟಕಾಃ ? ಯಾವತೀರ್ವಾ ? ಯಥಾ ವಾ ?'' ಎಂಬ ಮೂರು ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ತಿಳಿದವನು ಮುಕ್ತಿಯನ್ನು ಪಡೆಯುತ್ತಾನೆ ಎಂದು ಹೇಳಲಾಗಿದೆ. ಪ್ರಸಿದ್ಧವಾದ ಇಷ್ಟಕಾಗಳ ಜ್ಞಾನ ಮುಕ್ತಿಗೆ ಕಾರಣವಾಗುವುದಿಲ್ಲ. ಇಷ್ಟಕಾಗಳಿಗೆ ಅಭಿಮಾನಿಗಳಾದ ಅನ್ಯದೇವತೆಗಳ ಜ್ಞಾನದಿಂದಲೂ ಮುಕ್ತಿ ಸಾಧ್ಯವಿಲ್ಲ. ಆದ್ದರಿಂದ ಇಷ್ಟಕಾಭಿಮಾನಿದೇವತಾಪರವೆಂದು ಹೇಳುವುದು ಕೂಡಾ ಸಮುಚಿತವಾಗುವುದಿಲ್ಲ.

ಆದ್ದರಿಂದ ಸ್ಮೃತಿಯಿಂದಲೆ ಇದರ ಅರ್ಥವನ್ನು ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ಇಷ್ಟಕಾದೇವತೆ ಇಲ್ಲಿ ವಿಷ್ಣುವೇ ಆಗಿದ್ದಾನೆ. ಮುನ್ನೂರ ಅರವತ್ತು ಇಷ್ಟಕಾಗಳಲ್ಲಿ ತಾನು ಸಂಸ್ಥಿತನಾಗಿದ್ದಾನೆ. ಅಂತಹ ಪರಮಾತ್ಮನನ್ನು ತಿಳಿದು ಕರ್ಮವನ್ನು ಆಚರಿಸುವುದು ಮುಕ್ತಿಗೆ ಸಹಕಾರಿಯಾಗುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ.

ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ
ವರಂ ತವೇಹಾದ್ಯ ದದಾನಿ ಭೂಯಃ ।
ತವೈವ ನಾಮ್ನಾ ಭವಿತಾಯಮಗ್ನಿಃ
ಶೃಂಕಾಂ ಚೇಮಾಮನೇಕರೂಪಾಂ ಗೃಹಾಣ ॥ ೧.೧.೧೬ ॥

ನಚಿಕೇತನ ಅನುವಾದದಿಂದ ಸಂತುಷ್ಟರಾದ ಯಮದೇವರು ತತ್‌ಕ್ಷಣದಲ್ಲಿ ತಾವಾಗಿಯೇ ಹೆಚ್ಚಿನ ವರವನ್ನು ನೀಡುತ್ತಾ ಹೇಳಿದರು. ಹೇ ನಚಿಕೇತ ! ನಿನ್ನ ಅನುವಾದದಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಉಪದೇಶಮಾಡಿದ ಇಷ್ಟಕಾಚಿತಿರೂಪವಾದ ಈ ಅಗ್ನಿ ನಿನ್ನ ಹೆಸರಿನಿಂದಲೆ ಪ್ರಸಿದ್ಧವಾಗಲಿ. ಅರ್ಥಾತ್ ಈ ಅಗ್ನಿಯು ಇನ್ನು ಮುಂದೆ "ನಾಚಿಕೇತಾಗ್ನಿ" ಎಂದೇ ಪ್ರಸಿದ್ಧವಾಗಲಿ ಎಂದು. ಮತ್ತು ಸ್ವರ್ಣಮಯವಾದ ಈ ಕಂಠಮಾಲೆಯನ್ನು ನೀನು ಸ್ವೀಕರಿಸು ಎಂದು ಹೇಳಿ ಅದನ್ನು ನೀಡಿದರು.

ತ್ರಿನಾಚಿಕೇತಃ ತ್ರಿಭಿರೇತ್ಯ ಸಂಧಿಂ
ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ ।
ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ
ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ ॥ ೧.೧.೧೭ ॥

ನಿನ್ನ ಹೆಸರಿನಿಂದಲೇ ಈ ಅಗ್ನಿಯು ಪ್ರಸಿದ್ಧವಾಗಲಿ ಎಂದು ಯಮದೇವರು ನುಡಿದರು. ವರ ನೀಡಿದ ತಾವೆ ಮೊದಲು "ತ್ರಿನಾಚಿಕೇತಃ" ಎಂದು ನಚಿಕೇತನ ಹೆಸರಿನಿಂದ ಆ ಅಗ್ನಿಯನ್ನು ವ್ಯವಹರಿಸುತ್ತಾ ಮೂರುಬಾರಿ ನಾಚಿಕೇತಾಗ್ನಿಯನ್ನು ಚಯನ ಮಾಡಿದವರಿಗೆ ಸಿಗುವ ಫಲವನ್ನು ಈ ಮಂತ್ರದಿಂದ ಯಮದೇವರು ತಿಳಿಸುತ್ತಾರೆ.

ಮೂರು ಬಾರಿ ನಾಚಿಕೇತಾಗ್ನಿಯನ್ನು ಚಯನ ಮಾಡಿದವರು, ಸರ್ವಥಾ ಅಪರಿಹಾರ್ಯವಾದ ಯಜ್ಞ-ದಾನ-ತಪಸ್ಸುಗಳನ್ನು ಅನುಷ್ಠಾನ ಮಾಡುವವರು, ಸಕಲವೇದ-ಪ್ರತಿಪಾದ್ಯನಾದ, ಸರ್ವಜ್ಞನಾದ, ಸಕಲರಿಂದ ಸ್ತುತ್ಯನಾದ, ಕ್ರೀಡಾದಿಗುಣಸಂಪನ್ನನಾದ, ಭಗವಂತನನ್ನು ಋಗ್ವೇದ-ಯಜುರ್ವೇದ-ಸಾಮವೇದಗಳಲ್ಲಿ ನಿರೂಪಿತವಾದಂತೆ ತಿಳಿದವರು ಜನನಮರಣಗಳನ್ನು ಪರಿಹರಿಸಿಕೊಳ್ಳುತ್ತಾರೆ.

**ವೇದೇಶೀಯವಿಶೇಷ** - ವೇದೋಕ್ತವಾದ ರೀತಿಯಲ್ಲಿ ಸಂಪಾದಿತವಾದ ಭಗವಂತನ ಜ್ಞಾನ ಸಾಕ್ಷಾತ್ತಾಗಿ ಮುಕ್ತಿಗೆ ಸಾಧನವಾಗುವದಿಲ್ಲ. ಕಿಂತು ಮನನಾದಿದ್ವಾರಾ ಮುಕ್ತಿಗೆ ಸಾಧನವಾಗುತ್ತದೆ. ಮುಕ್ತಿ ಇದು ಜನನ-ಮರಣಗಳ ತರಣಮಾತ್ರವಲ್ಲ. ಕಿಂತು ಸುಖವೂ ಮುಕ್ತಿಯಲ್ಲಿ ಸೇರಿಕೊಳ್ಳುತ್ತದೆ. ''ಬ್ರಹ್ಮ'' ಎಂದರೆ ವೇದಗಳು. ವೇದಗಳಿಂದ ಅಭಿವ್ಯಕ್ತನಾಗಿದ್ದಾನೆ ಆದ್ದರಿಂದ ಭಗವಂತ ''ಬ್ರಹ್ಮಜ'' ಸರ್ವವನ್ನು ಅನಾದಿಕಾಲದಿಂದ ತಿಳಿದುಕೊಂಡಿದ್ದಾನೆ. ಆದ್ದರಿಂದ ಭಗವಂತ ''ಜ್ಞ'' ಈ ಎರಡು ಕಾರಣಗಳಿಂದ ಭಗವಂತನನ್ನು ಉಪನಿಷತ್ತು ''ಬ್ರಹ್ಮಜಜ್ಞ'' ಎಂದು ಸಂಬೋಧಿಸುತ್ತದೆ. ಭಗವಂತ ಕ್ರೀಡಾದಿಗುಣಸಂಪನ್ನನಾಗಿದ್ದಾನೆ. ಸರ್ವರಿಂದ ಸುತ್ತ್ಯನಾಗಿದ್ದಾನೆ. ಇಂತಹ ಭಗವಂತನನ್ನು ತಿಳಿದು ಮನನಾದಿಗಳಿಂದ ಅವನ ಅಪರೋಕ್ಷವನ್ನು ಮಾಡಿಕೊಂಡವರು ಆತ್ಯಂತಿಕ ಸುಖರೂಪವಾದ ಮುಕ್ತಿಯನ್ನು ಪಡೆಯುತ್ತಾರೆ.

**ವಾದಿರಾಜೀಯವಿಶೇಷ** - ಇಲ್ಲಿ ತ್ರಿವಿಧ ಕರ್ಮಗಳೆಂದರೆ ಯಜ್ಞ-ಅಧ್ಯಯನ-ದಾನಗಳು ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಅದು ಸರಿಯಲ್ಲ. ಯಜ್ಞ-ದಾನ-ತಪಸ್ಸು ಇವುಗಳು ಆವಶ್ಯಕವೆಂದು ಗೀತೆಯ ''ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್'' ಈ ಮಾತು ತಿಳಿಸುತ್ತದೆ. ಆದ್ದರಿಂದ ಯಜ್ಞ-ದಾನ-ತಪಸ್ಸು ಎಂಬ ತ್ರಿವಿಧಕರ್ಮಗಳನ್ನೆ ಇಲ್ಲಿ ಸ್ವೀಕರಿಸುವದು ಸೂಕ್ತವಾಗುತ್ತದೆ.

ಗೀತೆಯ ಪ್ರಮಾಣಕ್ಕೆ ಅನುಗುಣವಾಗಿ ಯಜ್ಞ-ದಾನ-ತಪಸ್ಸು ಎಂಬ ಮೂರುಕರ್ಮಗಳು ಎಂದು ಪ್ರಕೃತ ಅರ್ಥಮಾಡಿದರೇ ಅಧ್ಯಯನವನ್ನು ಪರಿತ್ಯಜಿಸಿದಂತಾಗುತ್ತದೆ ಎಂಬ ಶಂಕೆ ಬರುತ್ತದೆ. ಈ ಶಂಕೆ ಗೀತೆಯಿಂದಲೇ ಪರಿಹೃತವಾಗುತ್ತದೆ. ಗೀತೆಯು ತಪಸ್ಸಿನ ತ್ರೈವಿಧ್ಯವನ್ನು ವಿವರಿಸುತ್ತಾ ಸ್ವಾಧ್ಯಾಯವನ್ನೂ ವಾಙ್ಮಯತಪಸ್ಸಿನಲ್ಲಿ ಅಂತರ್ಭೂತಮಾಡುತ್ತದೆ. ಆದ್ದರಿಂದ ಅಧ್ಯಯನವೂ ಇಲ್ಲಿ ವಿವಕ್ಷಿತವಾಗುತ್ತದೆ. ಇಜ್ಯಾಧ್ಯಯನದಾನರೂಪವಾದ ತ್ರಿವಿಧ-ಕರ್ಮಗಳನ್ನು ವಿವಕ್ಷೆಮಾಡಿದಾಗ ತಪಸ್ಸನ್ನು ಪರಿತ್ಯಜಿಸಬೇಕಾಗುತ್ತದೆ. ಆದ್ದರಿಂದ ಶ್ರೀಮದಾಚಾರ್ಯರು ಹೇಳಿದ ವಿಭಾಗ ಸ್ವರಸವಾಗುತ್ತದೆ.

ತ್ರಿನಾಚಿಕೇತಃ ತ್ರಯಮೇತದ್ ವಿದಿತ್ವಾ
ಯ ಏವಂ ವಿದ್ವಾನ್ ಚಿನುತೇ ನಾಚಿಕೇತಮ್ ।
ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ
ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥೧.೧.೧೮॥

ಪೂರ್ವದಲ್ಲಿ ಹೇಳಿದ ವಿಷಯವನ್ನೆ ಮತ್ತೆ ವಿಶದವಾಗಿ ಈ ಮಂತ್ರದಿಂದ ಯಮದೇವರು ಉಪದೇಶಮಾಡುತ್ತಿದ್ದಾರೆ.

ಅಗ್ನಿಚಯನವನ್ನು ಮಾಡುವ ವಿದ್ವಾಂಸನು ಇಷ್ಟಕಾದೇವತೆಯಾದ ವಿಷ್ಣುವಿನ ಸ್ವರೂಪವನ್ನು ಇಷ್ಟಕಾಗಳ ಸಂಖ್ಯೆಯನ್ನು ಇಷ್ಟಕಾಗಳ ಪರಿಮಾಣವನ್ನು ಯಥಾರ್ಥವಾಗಿ ತಿಳಿದುಕೊಂಡಿರಬೇಕು. ತಾನು ತಿಳಿದಂತೆ ಮೂರುಬಾರಿ ನಾಚಿಕೇತಾಗ್ನಿಯ ಅನುಷ್ಠಾನವನ್ನು ಮಾಡಬೇಕು. ಅರ್ಥಾತ್ ಶ್ಯೇನ-ಕೂರ್ಮ ಮೊದಲಾದ ಆಕಾರಗಳಲ್ಲಿ ವೇದಿಯನ್ನು ರಚಿಸಿ ಯಾಗವನ್ನು ಮಾಡಬೇಕು. ಅಂತಹ ಜ್ಞಾನಿಯು ತನ್ನ ಎದುರಿಗೆ ಇರುವ ಮೃತ್ಯುವಿನ ಪಾಶವನ್ನು ಪರಿಹರಿಸಿಕೊಂಡು ಶೋಕವಿದೂರನಾಗುತ್ತಾನೆ. ಸ್ವರ್ಗಸುಖವನ್ನನುಭವಿಸಿ ಕ್ರಮವಾಗಿ ಮುಕ್ತಿಯನ್ನು ಪಡೆಯುತ್ತಾನೆ.

ಏಷ ತೇಽಗ್ನಿರ್ನಾಚಿಕೇತಃ ಸ್ವರ್ಗ್ಯೋ
ಯಮವೃಣೀಥಾ ದ್ವಿತೀಯೇನ ವರೇಣ ।
ಏತಮಗ್ನಿಂ ತವೈವ ಪ್ರವಕ್ಷ್ಯಂತಿ ಜನಾಸಃ
ತೃತೀಯಂ ವರಂ ನಚಿಕೇತೋ ವೃಣೀಷ್ವ ॥ ೧.೧.೧೯ ॥

ಪ್ರೀತಿಪೂರ್ವಕವಾಗಿ ತಾನು ನೀಡಿದ ವರವನ್ನು ನಚಿಕೇತನ ಗಮನಕ್ಕೆ ತರುತ್ತಿದ್ದಾನೆ ಯಮ. ಹೇ ನಚಿಕೇತ ! ನೀನು ಬೇಡಿದ ಎರಡನೆಯ ವರವಾದ ಸ್ವರ್ಗ್ಯಾಗ್ನಿಯ ಜ್ಞಾನವನ್ನು ನಿನಗೆ ಉಪದೇಶ ಮಾಡಿದ್ದೇನೆ. ಈ ಅಗ್ನಿಯು ನಿನ್ನ ಹೆಸರಿನಿಂದಲೆ ಪ್ರಸಿದ್ಧವಾಗುತ್ತದೆ. ನಾನು ಮಾತ್ರವಲ್ಲ, ಜ್ಞಾನಿಗಳೆಲ್ಲರೂ ನಿನ್ನ ಹೆಸರಿನಿಂದಲೆ ಈ ಅಗ್ನಿಯನ್ನು ಗುರುತಿಸುತ್ತಾರೆ. ನೆನಪಿನಲ್ಲಿಟ್ಟುಕೊ ನಾನು ನೀಡಿದ ಎರಡನೆಯ ವರವಿದು. ಇನ್ನು ಮೂರನೆಯ ವರವನ್ನು ಕೇಳು ಎಂದು ನಚಿಕೇತನಿಗೆ ಯಮ ಹೇಳಿದ.

ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ
ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ ।
ಏತದ್ ವಿದ್ಯಾಮನುಶಿಷ್ಟಃ ತ್ವಯಾಹಂ
ವರಾಣಾಮೇಷ ವೃತಃ ತೃತೀಯಃ ॥ ೧.೧.೨೦ ॥

ಮುಕ್ತನಾದ, ಮೃತನಾದ ಮನುಷ್ಯನಿಗೆ ನಿಯಾಮಕನಾಗಿ ಭಗವಂತ ಇರುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ. ಮುಕ್ತನಾದ ಮೇಲೆ ಮನುಷ್ಯ ನಿಯಾಮಕರಹಿತನಾಗುತ್ತಾನೆ ಎಂದು ಅಜ್ಞಾನಿಗಳು ಹೇಳುತ್ತಾರೆ. ಇದರಲ್ಲಿ ವಾಸ್ತವವಾವುದು. ಭಗವಂತ ನಿಯಾಮಕನಾಗಿದ್ದರೆ ಅವನ ಸ್ವರೂಪವನ್ನು ಯಥಾವತ್ತಾಗಿ ತಿಳಿಯಲು ನಾನು ಬಯಸುತ್ತೇನೆ. ಇದುವೆ ನಾನು ಕೇಳಬಯಸಿದ ಮೂರನೆಯ ವರವೆಂದು ನಚಿಕೇತ ಯಮನನ್ನು ಪ್ರಾರ್ಥಿಸಿಕೊಂಡ.

**ವಿಶೇಷ** - ಮರಣವಾದಮೇಲೆ ಶರೀರೇಂದ್ರಿಯಮನೋವ್ಯತಿರಿಕ್ತನಾದ ಜೀವ ಇದ್ದಾನೆ ಎಂದು ಕೆಲವರು ಹೇಳುತ್ತಾರೆ. ಅಂತಹ ಜೀವನಿಲ್ಲವೆಂದು ಹಲವರು ಹೇಳುತ್ತಾರೆ. ಈ ಎರಡು

ಮಾತುಗಳಿಂದ ಮರಣವಾದಮೇಲೆ ಜೀವನಿದ್ದಾನೊ ಇಲ್ಲವೋ ಎಂಬ ಸಂದೇಹ ನನಗೆ ಇದೆ. ಅದನ್ನು ನೀನು ತಿಳಿಸು ಎಂದು ನಚಿಕೇತನ ಪ್ರಶ್ನೆಯ ಅಭಿಪ್ರಾಯವೆಂದು ಹಲವರು ಹೇಳುತ್ತಾರೆ.

ತಂದೆಯ ಶಾಪದಿಂದ ಶರೀರವನ್ನು ಪರಿತ್ಯಜಿಸಿ ಯಮಲೋಕಕ್ಕೆ ತೆರಳಿ ಯಮನ ಮುಂದೆ ನಿಂತಿರುವ ನಚಿಕೇತನಿಗೆ ಈ ಪ್ರಶ್ನೆ ಉದ್ಭವಿಸುವದು ಸಾಧ್ಯವಿಲ್ಲ. ಮೃತನಾದಮೇಲೂ ತನ್ನ ಅಸ್ತಿತ್ವ ತನ್ನ ಪ್ರತ್ಯಕ್ಷಕ್ಕೆ ಗೋಚರವಾಗುತ್ತಲೇ ಇದೆ.

ಉತ್ತರ ಕೊಡಲಾಗದಷ್ಟು ಗಹನವಾದ, ಮಹತ್ತ್ವವಾದ ಪ್ರಶ್ನೆಯೂ ಇದಲ್ಲ. ಆದ್ದರಿಂದ ಶ್ರೀಮದಾಚಾರ್ಯರು ನಚಿಕೇತನ ಪ್ರಶ್ನೆಯ ಅಭಿಪ್ರಾಯವನ್ನು ಸುಂದರವಾಗಿ ನಮ್ಮ ಮುಂದೆ ಪ್ರಸ್ತುತಪಡಿಸಿದ್ದಾರೆ. ಸೂಕ್ತವಾದ, ಪುರಾಣಪ್ರಮಿತವಾದ ಪ್ರಶ್ನೆ ಇದು. ಇದು ಗಹನವಾದ ಪ್ರಶ್ನೆ, ಇದು ಮಹತ್ತ್ವದ ಪ್ರಶ್ನೆ. ಆದ್ದರಿಂದ ಇದಕ್ಕೆ ಉತ್ತರ ನೀಡುವ ಮೊದಲು ನಚಿಕೇತನ ಯೋಗ್ಯತೆಯನ್ನು ನಮಗೆಲ್ಲರಿಗೆ ತಿಳಿಸುವುದಕ್ಕೋಸ್ಕರ ಅನೇಕ ಪ್ರಲೋಭನೆಗಳನ್ನು ಅವನ ಮುಂದೆ ಯಮದೇವರು ಇಡುತ್ತಾರೆ.

ಮುಕ್ತನಾದ ಮೇಲೆ ದುಃಖದ ಪ್ರಸಕ್ತಿಯೆ ಇಲ್ಲದ್ದರಿಂದ ನಿಯಾಮಕಪ್ರಶ್ನೆಯೂ ಅನುಪಪನ್ನವೆಂದು ಹಲವರು ಶ್ರೀಮದಾಚಾರ್ಯರ ಮಾತನ್ನು ವಿಮರ್ಶಿಸಿದ್ದಾರೆ. ಮುಕ್ತರಾದ ಬ್ರಹ್ಮಾದಿದೇವತೆಗಳೂ ತಮಗಿಂತಲೂ ನೀಚರಾದವರಿಗೆ ನಿಯಾಮಕರಾಗಿ ಇರುತ್ತಾರೆಂದು ಶಾಸ್ತ್ರಗಳು ತಿಳಿಸುತ್ತಿರುವಾಗ ಸಕಲಚರಾಚರಪ್ರಪಂಚವನ್ನು ಸೃಷ್ಟಿಮಾಡಿ ನಮ್ಮಿಂದ ಸಾಧನೆಯನ್ನು ಮಾಡಿಸಿ ನಮಗೆ ಸ್ವರೂಪಾನಂದ ಆಗುವ ಹಾಗೆ ಮಾಡಿದ ಪ್ರಭುವಾದ ಪರಮಾತ್ಮ ಮುಕ್ತಿಯಲ್ಲಿ ನಿಯಾಮಕನಲ್ಲವೆನ್ನುವದು ತೀರ ಹಾಸ್ಯಾಸ್ಪದವಿಷಯವಾಗಿದೆ.

ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ
ನ ಹಿ ಸುಜ್ಞೇಯೋಽಣುರೇಷ ಧರ್ಮಃ ।
ಅನ್ಯಂ ವರಂ ನಚಿಕೇತೋ ವೃಣೀಷ್ವ
ಮಾ ಮೋಪರೋತ್ಸೀರತಿ ಮಾ ಸೃಜೈವಮ್ ॥ ೧.೧.೨೧ ॥

ನಚಿಕೇತನಿಂದ ಪ್ರಾರ್ಥಿತನಾದ ಯಮನು "ಅಣೋರಣೀಯಾನ್" ಎಂಬ ದ್ವಿತೀಯಾಧ್ಯಾಯದ ವಚನಗಳಿಂದ ಮುಕ್ತಜೀವನಿಯಾಮಕವಾದ ಭಗವತ್ಸ್ವರೂಪವನ್ನು ಉಪದೇಶಿಸಲಿದ್ದಾರೆ. "ಯಥಾ ಮರಣಂ ಪ್ರಾಪ್ಯಾತ್ಮಾ" ಇತ್ಯಾದಿಯಾದ ಐದನೆಯ ಅಧ್ಯಾಯದ ಪ್ರಸಂಗದಿಂದ ಮೃತಜೀವನಿಯಾಮಕಭಗವತ್ಸ್ವರೂಪವನ್ನು ಉಪದೇಶಿಸು-ವವರಿದ್ದಾರೆ. ಮುಕ್ತಾಮುಕ್ತಜೀವನಿಯಾಮಕನಾದ ಭಗವಂತನ ಜ್ಞಾನ ಮುಕ್ತಿಗೆ ಸಾಧನವಾಗಿದೆ. ಆದ್ದರಿಂದ ಅತಿಗೋಪ್ಯವಾದ ವಿದ್ಯೆ ಇದಾಗಿದೆ. ಶ್ರೋತೃವಿನ ಬುದ್ಧಿ ದೃಢವಾಗಿಲ್ಲದಿದ್ದರೆ ಈ

ವಿದ್ಯೆಯನ್ನು ಉಪದೇಶಿಸಬಾರದು. ಆದ್ದರಿಂದ ನಚಿಕೇತನ ಬುದ್ಧಿಯ ದಾರ್ಢ್ಯವನ್ನು ಪರೀಕ್ಷಿಸುವದಕ್ಕಾಗಿ ಈ ವಿದ್ಯೆ ದುರ್ವಿಜ್ಞೇಯವೆಂದು ಈ ಮಂತ್ರ ಪ್ರತಿಪಾದಿಸುತ್ತಿದೆ.

ಹೇ ನಚಿಕೇತನೇ ! ಮುಕ್ತಾಮುಕ್ತಸಕಲಜೀವನಿಯಾಮಕನಾದ ಭಗವಂತನ ವಿಷಯದಲ್ಲಿ ದೇವತೆಗಳೂ ಸಂಶಯಪಟ್ಟಿದ್ದಾರೆ. ಸಕಲಜಗದ್ಧಾರಕನಾದದ್ದರಿಂದ ಧರ್ಮನಾಮಕನಾದ ಭಗವಂತ ಅತಿಸೂಕ್ಷ್ಮನಾಗಿದ್ದಾನೆ. ಅರ್ಥಾತ್ ಅವನ ಸ್ವಭಾವ ಅವ್ಯಕ್ತವಾಗಿದೆ. ಹೀಗಾಗಿ ಅವನ ಜ್ಞಾನ ಸುಲಭಸಾಧ್ಯವಲ್ಲ. ಈ ವಿಷಯ ಬಲು ಕ್ಲಿಷ್ಟವಾಗಿದೆ. ಆದ್ದರಿಂದ ಇದನ್ನು ಬಿಟ್ಟು ಮತ್ತೊಂದು ವರವನ್ನು ಕೇಳು. ಅದನ್ನು ನಾನು ಪೂರ್ಣಮಾಡುತ್ತೇನೆ. ಭಗವಂತನ ವಿಷಯನ್ನು ಹೇಳು ಎಂದು ನನ್ನನ್ನು ನಿರ್ಬಂಧಗೊಳಿಸಬೇಡ.

**ವೇದೇಶೀಯವಿಶೇಷ** - 'ಏತದ್ವಿದ್ಯಾಮನುಶಿಷ್ಟಸ್ತ್ವಯಾಽಹಮ್' ಎಂದು ಮುಕ್ತಾ-ಮುಕ್ತಜೀವನಿಯಾಮಕನಾದ ಭಗವಂತನ ಸ್ವರೂಪವನ್ನು ನಚಿಕೇತ ಪ್ರಶ್ನಿಸಿದ್ದಾನೆ. ಹೊರತು ಧರ್ಮದ ಸ್ವರೂಪವನ್ನಲ್ಲ. ಆದರೆ 'ನ ಹಿ ಸುಜ್ಞೇಯೋ ಅಣುರೇಷ ಧರ್ಮಃ' ಎಂದು ಧರ್ಮದ ಅಣುತ್ವವನ್ನು ಯಮದೇವರು ಉಪದೇಶಿಸುತ್ತಿದ್ದಾರೆ. ಇದು ಅಸಂಗತವಾದ ಉತ್ತರವಾಗುತ್ತದೆ. ಆದ್ದರಿಂದ ಪ್ರಕೃತ ''ಧರ್ಮ'' ಎಂದರೆ ಭಗವಂತ ಎಂದೇ ಅರ್ಥಮಾಡಿ-ಕೊಳ್ಳಬೇಕು. ಸರ್ವಜಗತ್ತನ್ನು ತಾನೊಬ್ಬನೆ ಸ್ವತಂತ್ರವಾಗಿ ಧರಿಸುತ್ತಾನೆ ಆದ್ದರಿಂದ ಭಗವಂತ ಧರ್ಮನಾಮಕನಾಗಿದ್ದಾನೆ. ಧಾರಕ ಎಂಬ ಅರ್ಥದಲ್ಲಿ ಧರ್ಮ ಎಂಬ ಶಬ್ದವನ್ನು 'ಪೃಥಿವೀಧರ್ಮಮೂರ್ಧನಿ' ಎಂದು ಮೋಕ್ಷಧರ್ಮವು ಪ್ರಯೋಗಿಸಿದೆ. ಶ್ರುತಿಯು 'ಧರ್ಮೋ ವಾ ಇದಮಗ್ರ ಆಸೀತ್' ಎಂದು ಧರ್ಮನಾಮಕನಾದ ಭಗವಂತ ಮಾತ್ರ ಸೃಷ್ಟಿಯ ಆದಿಯಲ್ಲಿದ್ದ ಎಂದು ಪರಮಾತ್ಮಪರವಾಗಿ ಪ್ರಯೋಗಿಸಿದೆ. ಆದ್ದರಿಂದ ಧರ್ಮಶಬ್ದವು ಇಲ್ಲಿ ಭಗವತ್ಪರವಾಗಿದೆ ಎಂದು ತಿಳಿಯಬೇಕು. ಹೀಗೆ ಅರ್ಥವನ್ನು ಹೇಳುವದು ಪ್ರಕೃತ ಸ್ವರಸವಾಗುತ್ತದೆ. ಅದ್ವೈತಿಗಳು ಧರ್ಮಶಬ್ದ ಆತ್ಮಪರವೆಂದು ಹೇಳುತ್ತಾರೆ.

**ರಾಘವೇಂದ್ರೀಯವಿಶೇಷ** - ಭಗವದ್ವಿಷಯಕವಾದದ್ದರಿಂದ ಪ್ರೇತಪ್ರೇರಕತ್ವವಿಷಯ ದುರ್ವಿಜ್ಞೇಯವೆನ್ನುವದಾದರೆ 'ಪ್ರ ತೇ ಬ್ರವೀಮಿ' ಇತ್ಯಾದಿ ಮಾತುಗಳಿಂದ ಉಪದಿಷ್ಟವಾದ ಇಷ್ಟಕಾಚಿತಾಗ್ನಿಸ್ಥವಾದ ಭಗವದ್ವಿಷಯವೂ ದುರ್ವಿಜ್ಞೇಯವೇ ಆಗಿದೆ. ಅದನ್ನು ಉಪದೇಶ ಮಾಡಿ, ಪ್ರೇತಪ್ರೇರಕತ್ವದ ವಿಷಯ ಮಾತ್ರ ದುರ್ವಿಜ್ಞೇಯವಾಗಿದೆ. ಈ ವಿಷಯದಲ್ಲಿ ಪ್ರಶ್ನೆ ಕೇಳಬೇಡ. ಎಂದು ಯಮದೇವರು ಹೇಳುತ್ತಿದ್ದಾರೆ. ಇದು ಸಮಂಜಸವೇ ? ಎಂಬ ಸಮಸ್ಯೆಯನ್ನು ಮಾಡಿಕೊಂಡು ಅದನ್ನು ರಾಘವೇಂದ್ರಸ್ವಾಮಿಗಳು ತಮ್ಮ ಖಂಡಾರ್ಥದಲ್ಲಿ ಈ ರೀತಿಯಾಗಿ ಪರಿಹರಿಸುತ್ತಾರೆ.

ಇಷ್ಟಾಚಿತಾಗ್ನಿಸ್ಥವಾದ ಭಗವಂತನ ಸ್ವರೂಪದ ಜ್ಞಾನದಿಂದ ಮುಕ್ತಿಯಲ್ಲಿ ಸುಖಾತಿಶಯವೇ ಹೊರತು ಮುಕ್ತಿಯಲ್ಲ. ಮುಕ್ತಿ ಇದು ಪ್ರೇತಪ್ರೇರಕನಾದ ಭಗವಂತನ ಗುಣಾದಿಮಾಹಾತ್ಮ್ಯದ ಜ್ಞಾನದಿಂದಲೆ ಆಗುತ್ತದೆ. ಆದ್ದರಿಂದ ಈ ಜ್ಞಾನ ದುರ್ವಿಜ್ಞೇಯವೆಂದು ಯಮ ಇಲ್ಲಿ ಹೇಳುತ್ತಿದ್ದಾನೆ.

**ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ**
**ತ್ವಂ ಚ ಮೃತ್ಯೋ ಯನ್ನ ಸುಜ್ಞೇಯಮಾತ್ಥ ।**
**ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯೋ**
**ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ ॥೧.೧.೨೨॥**

ಯಮದೇವರ ಮಾತನ್ನು ಕೇಳಿದ ನಚಿಕೇತ ಹೇಳಿದ. ದೇವತೆಗಳಿಗೂ ಈ ವಿಷಯದಲ್ಲಿ ವಿಚಿಕಿತ್ಸೆ ಇದೆ ಎಂದು ನೀವೆ ಹೇಳುತ್ತಿದ್ದೀರಿ. ಅಂದಮೇಲೆ ಈ ವಿಷಯ ಬಹಳ ವಿಶಿಷ್ಟ ಮತ್ತು ದುರ್ಲಭವೆಂದು ಸಿದ್ಧವಾಗುತ್ತದೆ. ಈ ವರವನ್ನು ಯಾರಿಂದಲೂ ನಾನು ಪಡೆಯಲಾಗುವದಿಲ್ಲ. ನಿಮ್ಮಂತಹ ಜ್ಞಾನಿಗಳಿಂದಲೇ ಇದನ್ನು ಪಡೆಯಬೇಕು. ಈ ವರಕ್ಕಿಂತಲೂ ವಿಶಿಷ್ಟವಾದ ವರವೂ ಮತ್ತೊಂದಿಲ್ಲ. ಹೀಗಾಗಿ ಇದರ ಹೊರತು ನಿಮ್ಮಿಂದ ನಾನು ಯಾವುದನ್ನೂ ಬೇಡುವದಿಲ್ಲ. ॥ ೧.೧.೨೨ ॥

**ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ**
**ಬಹೂನ್ ಪಶೂನ್ ಹಸ್ತಿಹಿರಣ್ಯಮಶ್ವಾನ್ ।**
**ಭೂಮೇರ್ಮಹದಾಯತನಂ ವೃಣೀಷ್ವ**
**ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ॥೧.೧.೨೩॥**

ನಾನಾರೀತಿಯಾದ ಪ್ರಲೋಭಗಳಿಗೆ ಸಿಲುಕದೆ ವಿಷಯವೈರಾಗ್ಯವನ್ನು ಸಂಪಾದಿಸಿದವನು ಮೋಕ್ಷಶಾಸ್ತ್ರದಲ್ಲಿ ಅಧಿಕಾರಿಯಾಗುತ್ತಾನೆ. ಇದನ್ನು ತಿಳಿಸಲು ಗುಹ್ಯವಾದ ವರವನ್ನು ಬೇಡುತ್ತಿರುವ ನಚಿಕೇತನ ಸ್ಥೈರ್ಯವನ್ನು ನಿರೀಕ್ಷಿಸುವುದಕ್ಕಾಗಿ ನಾನಾಪ್ರಲೋಭಗಳನ್ನು ನಚಿಕೇತನ ಮುಂದೆ ಯಮದೇವರು ಇಡುತ್ತಿದ್ದಾರೆ.

ನೂರು ವರ್ಷ ಬಾಳುವ ಪುತ್ರಪೌತ್ರಾದಿ ಸಂಪತ್ತನ್ನು ಕೇಳು. ಅತಿಶಯಿತವಾದ ಗೋ ಮೊದಲಾದ ಪಶುಸಂಪತ್ತಿಯನ್ನು ನೀನು ಬೇಡು. ಐಶ್ವರ್ಯದ್ಯೋತಕವಾದ ಗಜ-ಹಿರಣ್ಯ-ಅಶ್ವಸಂಪತ್ತಿಯನ್ನು ವರವಾಗಿ ಕೇಳು. ಅತಿವಿಸ್ತೃತವಾದ ಭೂಮಿಯನ್ನು ನಿನ್ನ ನಿವಾಸಕ್ಕಾಗಿ ಕೇಳಿಕೋ. ನಿನಗೆ ಬೇಕಾದಷ್ಟು ಅರ್ಥಾತ್ ಚತುರ್ಯುಗದಷ್ಟು ಅಥವಾ ಮನ್ವಂತರದಷ್ಟು ಸುಖವಾದ ಆಯುಷ್ಯವನ್ನು ಕೇಳು. ಅದನ್ನು ನಾನು ಪೂರ್ಣಗೊಳಿಸುತ್ತೇನೆ. ॥೧.೧.೨೩॥

**ಏತತ್ತುಲ್ಯಂ ಯದಿ ಮನ್ಯಸೇ ವರಂ**
**ವೃಣೀಷ್ವ ವಿತ್ತಂ ಚಿರಜೀವಿಕಾಂ ಚ ।**
**ಮಹಾಭೂಮೌ ನಚಿಕೇತಃ ತ್ವಮೇಧಿ**
**ಕಾಮಾನಾಂ ತ್ವಾ ಕಾಮಭಾಜಂ ಕರೋಮಿ ॥೧.೧.೨೪॥**

ನಾನು ನೀಡುತ್ತಿರುವ ಅತಿದುರ್ಲಭವಾದ ಈ ಭೋಗಭಾಗ್ಯಗಳು ನೀನು ಬೇಡಿದ ವರಕ್ಕೆ ಸಮಾನವಲ್ಲವೆಂದು ನೀನು ತಿಳಿದಿದ್ದರೆ ಎಷ್ಟು ವರಗಳನ್ನು ಕೇಳಿ ಪಡೆಯುವದರಿಂದ ಭಗವದ್ವಿಷಯಕವಾದ ಈ ವರ ಪಡೆದಂತೆ ಆಗುವದೆಂದು ನಿನಗೆ ತೋರುತ್ತದೋ ಅಷ್ಟು ವರಗಳನ್ನು ಕೇಳಿಕೋ. ಅವುಗಳನ್ನೆಲ್ಲ ನಾನು ಈಡೇರಿಸುತ್ತೇನೆ. ಬೇಕಾದಷ್ಟು ರತ್ನಮೊದಲಾದ ಸಂಪತ್ತನ್ನು ನೀನು ಬೇಡು. ಬಹುಮನ್ವಂತರ-ಕಲ್ಪಾಂತವಾದ ಚಿರಜೀವನವನ್ನು ಬೇಡು. ಸಮುದ್ರಪರ್ಯಂತವಾದ ಪುಣ್ಯಭೂಮಿಗೆ ಚಕ್ರವರ್ತಿ ನೀನಾಗಿ ಮೆರೆಯುವ ಹಾಗೆ ವರವನ್ನು ಕೇಳು. ಇಷ್ಟೆಲ್ಲ ಸುಖವನ್ನು ಅನುಭವಿಸಿ ಮತ್ತೆ ಪುಣ್ಯಭೂಮಿಯಲ್ಲಿ ಜನಿಸುವ ವರವನ್ನು ಬೇಡು. ನೀನು ಬಯಸಿದ ಎಲ್ಲ ಇಷ್ಟಾರ್ಥಗಳನ್ನು ನಾನು ಪರಿಪೂರ್ಣಮಾಡುತ್ತೇನೆ. ಸ್ವೇಚ್ಛೆಯಿಂದ ಈ ಎಲ್ಲ ಸುಖಗಳನ್ನು ಅನುಭವಿಸುವ ಹಾಗೆ ನಿನಗೆ ನಾನು ಅವಕಾಶವನ್ನು ಕೊಡುತ್ತೇನೆ. ಈ ವಿಷಯದಲ್ಲಿ ನಿನಗೆ ಸಂದೇಹವೇ ಬೇಡ. ॥೧.೧.೨೪॥

**ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ**
**ಸರ್ವಾನ್ ಕಾಮಾನ್ ಛಂದತಃ ಪ್ರಾರ್ಥಯಸ್ವ ।**
**ಇಮಾ ರಾಮಾಃ ಸರಥಾಃ ಸತೂರ್ಯಾ**
**ನ ಹೀದೃಶಾ ಲಂಭನೀಯಾ ಮನುಷ್ಯೈಃ ॥**
**ಆಭಿಃ ಮತ್ಪ್ರತ್ತಾಭಿಃ ಪರಿಚಾರಯಸ್ವ**
**ನಚಿಕೇತೋ ಮರಣಂ ಮಾನುಪ್ರಾಕ್ಷೀಃ ॥ ೧.೧.೨೫ ॥**

''ಕಾಮಾನಾಂ ತ್ವಾ ಕಾಮಭಾಜಂ ಕರೋಮಿ'' ಎಂದು ಹೇಳಿದ್ದನ್ನೇ ವಿಶದವಾಗಿ ಯಮದೇವರು ಹೇಳುತ್ತಿದ್ದಾರೆ.

ಹೇ ನಚಿಕೇತನೇ ! ನಿನ್ನ ಇಚ್ಛೆಗೆ ಬಂದಂತೆ ಅತಿಮಾನುಷವಾದ, ಅನೇಕವಿಧವಾದ ಕಾಮನೆಗಳನ್ನು ನನ್ನಿಂದ ಸ್ವೀಕರಿಸು. ಅವುಗಳನ್ನು ನಾನು ಪೂರ್ಣಮಾಡುತ್ತೇನೆ. ರಥ-ವಾದಿತ್ರಾದಿಗಳಿಂದ ಸಹಿತರಾದ, ನನ್ನ ಲೋಕದಲ್ಲಿರುವ, ರೂಪ-ಗುಣಾದಿಗಳಿಂದ ಉದಾರರಾದ ಸ್ತ್ರೀಯರನ್ನು ನಾನು ನಿನಗೆ ನೀಡುತ್ತೇನೆ. ಅವರು ನೃತ್ಯ-ಗಾನಾದಿಗಳಿಂದ ಸತತ ನಿನ್ನ ಸೇವೆಯಲ್ಲಿ ತೊಡಗುತ್ತಾರೆ. ಸುಖವಾಗಿ ನೀನಿರು. ಆದರೆ ಮೃತನಾದ, ಮುಕ್ತನಾದ ಜೀವನಿಗೆ ನಿಯಾಮಕನಾದ ಭಗವಂತನ ವಿಷಯವನ್ನು ಮಾತ್ರ ಕೇಳಬೇಡ. ॥೧.೧.೨೫॥

**ವಾದಿರಾಜೀಯವಿಶೇಷ** - ಮೋಕ್ಷೇತರವಾದ ಸಕಲ ಭೋಗ-ಭಾಗ್ಯಗಳನ್ನು ನಿಂದೆ ಮಾಡಿ ಅದನ್ನು ತೊರೆದ ನಚಿಕೇತ. ಆದರೆ ಪಿತೃಸೌಮನಸ್ಯರೂಪವಾದ ಐಹಿಕಫಲವನ್ನು ಯಾಕೆ ಮೊಟ್ಟಮೊದಲು ಪ್ರಾರ್ಥಿಸಿದನೆಂಬ ಪ್ರಶ್ನೆಯು ಇಲ್ಲಿ ಬರುತ್ತದೆ. ಇದಕ್ಕೆ ಉತ್ತರ ಇದಾಗಿದೆ.

"ಮಾತೃದೇವೋ ಭವ ಪಿತೃದೇವೋ ಭವ" ಇತ್ಯಾದಿಯಾಗಿ ಶಿಕ್ಷಕರಾದ ಪೂರ್ವಾಚಾರ್ಯರು ಮೋಕ್ಷೋಪಯೋಗಿಯಾದ ಸತ್ಕರ್ಮಗಳಲ್ಲಿ ಪಿತೃ-ಮಾತೃ-ಆಚಾರ್ಯರ ಸೌಮನಸ್ಯವೂ ಒಂದಾಗಿದೆಯೆಂದು ಪರಿಗಣಿಸಿದ್ದಾರೆ. ಆದ್ದರಿಂದ ಮುಕ್ತಿಗಾಗಿ ಅವಶ್ಯವಾಗಿ ಸಂಪಾದಿಸಬೇಕಾದ ಪಿತೃಸೌಮನಸ್ಯವನ್ನು ನಚಿಕೇತ ಮೊದಲು ಪ್ರಾರ್ಥಿಸಿದ. ॥ ೧.೧.೨೫ ॥

ಶ್ವೋಽಭಾವಾ ಮರ್ತ್ಯಸ್ಯ ಯದಂತಕೈತತ್
ಸರ್ವೇಂದ್ರಿಯಾಣಾಂ ಜರಯಂತಿ ತೇಜಃ ।
ಅಪಿ ಸರ್ವಂ ಜೀವಿತಮಲ್ಪಮೇವ
ತವೈವ ವಾಹಾಸ್ತವ ನೃತ್ತಗೀತಮ್ ॥ ೧.೧.೨೬ ॥

ಹೀಗೆ ಯಮನು ಪ್ರಸ್ತುತಪಡಿಸಿದ ಯಾವುದೇ ಆಸೆ-ಆಮಿಷಗಳಿಗೆ ವಶನಾಗದ ನಚಿಕೇತ ಉತ್ತರಿಸಿದ.

ಮನುಷ್ಯ ತಾನು ಪ್ರಾಣವನ್ನೇ ಪಣವಾಗಿಟ್ಟು ಸಂಪಾದಿಸಿದ ಪುತ್ರ-ಸಂಪತ್ತು-ಪಶು ಮೊದಲಾದವುಗಳೆಲ್ಲ ನಶ್ವರವೇ ಹೊರತು ಶಾಶ್ವತವಲ್ಲ. ಅಲ್ಲದೇ ಅವುಗಳನ್ನು ರಕ್ಷಿಸುವದರಲ್ಲಿಯೇ ತನ್ನ ಸರ್ವೇಂದ್ರಿಯಗಳ ಸಾಮರ್ಥ್ಯವೂ ಉಡುಗಿಹೋಗುತ್ತದೆ. ಈ ಸಂಪತ್ತಿನಿಂದ ಮನುಷ್ಯ ನಾನಾರೀತಿಯ ಚಿಂತೆಗೊಳಗಾಗುತ್ತಾನೆ. ಸಂಪತ್ತಿನ ವೃದ್ಧಿಯ ವಿಷಯದಲ್ಲಿ ಅದರ ಕ್ಷಯದ ವಿಷಯದಲ್ಲಿ ಚಿಂತೆಯು ಉಜ್ಜ್ವಲವಾಗುತ್ತದೆ. ಬಗೆಹರಿಯದ ಈ ಚಿಂತೆಯಿಂದ ಇಂದ್ರಿಯಗಳ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾನೆ. ಆದ್ದರಿಂದ ಅವುಗಳನ್ನು ಮರ್ತ್ಯನಾದ ನಾನು ಪ್ರಾರ್ಥಿಸಕೂಡದು. ಬ್ರಹ್ಮಕಲ್ಪಪರ್ಯಂತದ ಆಯುಷ್ಯವೂ ಅತ್ಯಲ್ಪವೇ ಆಗಿದೆ. ಆ ಆಯುಷ್ಯಕ್ಕೂ ಪರ್ಯವಸಾನವಿದೆ. ಪರ್ಯವಸಾನವಿಲ್ಲದ ಆಯುಷ್ಯ ಮರ್ತ್ಯರಿಗೆ ಸಾಧ್ಯವೇ ಇಲ್ಲ. ಪರ್ಯವಸಾನವಿಲ್ಲದ ಆಯುಷ್ಯ ಮುಕ್ತಿಯಲ್ಲಿ ಹೊರತು ಮತ್ತೊಂದು ಕಡೆ ಸಾಧ್ಯವಿಲ್ಲ. ಈ ಸ್ತ್ರೀಯರೆಲ್ಲ ನಿನ್ನ ದಾಸಿಯರಾಗಿಯೇ ಇರಲಿ. ಇವರು ಮಾಡುವ ನೃತ್ಯಾದಿಗಳೆಲ್ಲ ನಿನ್ನ ಪರಿಚರ್ಯೆಯೇ ಆಗಲಿ. ಇವುಗಳನ್ನು ನಾನು ಬಯಸುವದಿಲ್ಲ. ॥೧.೧.೨೬॥

ನ ವಿತ್ತೇನ ತರ್ಪಣೀಯೋ ಮನುಷ್ಯೋ
ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮ ಚೇತ್ ತ್ವಾಮ್ ।
ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ
ವರಸ್ತು ಮೇ ವರಣೀಯಃ ಸ ಏವ ॥ ೧.೧.೨೭ ॥

"ವೃಣೀಷ್ವ ವಿತ್ತಮ್" ಬಯಸಿದಷ್ಟು ಹಣವನ್ನು ಕೇಳು ಎಂದು ಯಮ ಹೇಳಿದ್ದ. ಅದಕ್ಕೆ ಉತ್ತರವನ್ನು ನಚಿಕೇತ ನೀಡುತ್ತಿದ್ದಾನೆ.

ಮರಣಾದಿಕ್ಲೇಶದಿಂದ ಕಂಗಾಲಾಗಿರುವ ಜೀವನನ್ನು ಹಣದಿಂದ ಸಂತೋಷಪಡಿಸ-ಲಾಗುವದಿಲ್ಲ. ಜನನ-ಮರಣರೂಪವಾದ ಸಂಸಾರದ ಕ್ಲೇಶವನ್ನೇ ಪರಿಹರಿಸಬೇಕು. ನಿಮ್ಮಂತಹ ದೇವತೆಗಳನ್ನು ನೋಡಿದಾಗ ಪ್ರತ್ಯೇಕವಾಗಿ ವಿತ್ತದ, ಆಯುಷ್ಯದ ಪ್ರಾರ್ಥನೆಯನ್ನು ಮಾಡಬಾರದು. ಇವುಗಳು ಭಗವದ್ಭಕ್ತರಾದ ನಿಮ್ಮಂಥವರ ದರ್ಶನದಿಂದ ತಾನಾಗಿಯೇ ಪ್ರಾಪ್ತವಾಗುತ್ತವೆ. ಆದ್ದರಿಂದ ವಿಷಯಗಳ ಸುಖದ ಪ್ರಾರ್ಥನೆಯನ್ನು ಪ್ರತ್ಯೇಕವಾಗಿ ಮಾಡಬೇಕಾಗಿಲ್ಲ. ಆಯುಷ್ಯಕ್ಕೆ ನೀವು ಅಧಿಪತಿಗಳು. ಜೀವರ ಆಯುಷ್ಯ ನಿಮ್ಮ ಅಧೀನವಾಗಿದೆ. ನೀವು ಬಯಸಿದಷ್ಟು ಕಾಲ ನಾವು ಜೀವಿಸುತ್ತೇವೆ. ನೀವು ರಕ್ಷಿಸುವವರೆಗೆ ಅಪಾಯಗಳಿಲ್ಲದೆ ಸುಖವಾಗಿ ನಾವು ಬದುಕುತ್ತೇವೆ. ಆದ್ದರಿಂದ ಆಯುಷ್ಯವನ್ನೂ ಪ್ರತ್ಯೇಕವಾಗಿ ಕೇಳಬೇಕಾಗಿಲ್ಲ. ನಮಗೆ ಬೇಕಾದಷ್ಟು ಸಂಪತ್ತು-ಆಯುಷ್ಯ ನಿಮ್ಮ ದೃಷ್ಟಿಯಿಂದಲೆ ದೊರೆಯುತ್ತದೆ. ಇದಕ್ಕೆ ನಿಮ್ಮವರ ಬೇಕಾಗಿಲ್ಲ. ಆದ್ದರಿಂದ ನನಗೆ ಬೇಕಾದ ವರ ಮತ್ತೊಂದಾವುದೂ ಇಲ್ಲ. ಮುಕ್ತಾಮುಕ್ತಸಕಲಜೀವರಾಶಿಗೆ ನಿಯಾಮಕನಾಗಿರುವ ಭಗವಂತನ ಜ್ಞಾನವನ್ನು ಪಡೆಯಬೇಕಾಗಿದೆ. ಇದರಿಂದ ಮುಕ್ತಿಯು ಸಿದ್ಧವಾಗುತ್ತದೆ. ನಾನು ಕೇಳಿದ ವರ ನೀವು ಸೂಚಿಸಿದ ಸಕಲ ವರಗಳಿಗಿಂತಲೂ ಪರಮೋಚ್ಚವಾಗಿದೆ. ॥೧.೧.೨೭॥

**ಅಜೀರ್ಯತಾಮಮೃತಾನಾಮುಪೇತ್ಯ**
**ಜೀರ್ಯನ್ ಮರ್ತ್ಯಃ ಕ್ವಾಧಃಸ್ಥಃ ಪ್ರಜಾನನ್ ॥**
**ಅಭಿಧ್ಯಾಯನ್ ವರ್ಣರತಿಪ್ರಮೋದಾ-**
**ನತಿದೀರ್ಘೇ ಜೀವಿತೇ ಕೋ ರಮೇತ ॥೧.೧.೨೮॥**

ಹೇ ಭಗವನ್ ! ಜರಾ-ಮರಣವಿದೂರರಾದ ನಿಮ್ಮಂಥಹ ಗುರುಗಳನ್ನು ಪಡೆದು ಕೂಡಾ ಭಗವಂತನ ಸ್ವರೂಪವನ್ನು ಉಪದೇಶ ಪಡೆಯದೇ, ಪುತ್ರಾದಿವಿಷಯಗಳನ್ನು ಪ್ರಾರ್ಥಿಸುವವರು ವಿನಾಶವನ್ನು ಹೊಂದುತ್ತಾರೆ. ಅರ್ಥಾತ್ ನರಕಭಾಜನರಾಗುತ್ತಾರೆ. (ಜೀವನಿಗೆ ಸ್ವಯಂ ವಿನಾಶವಿಲ್ಲ. ದೇಹದ ನಾಶ ಭಗವಂತನನ್ನು ತಿಳಿದವರಿಗೂ ಇದೆ. ಆದ್ದರಿಂದ ವಿನಾಶವೆಂದರೆ ನರಕಪ್ರಾಪ್ತಿ ಎಂದು ಅರ್ಥ) ಇದನ್ನು ಶ್ರುತಿಯೇ ಸ್ಪಷ್ಟಪಡಿಸುತ್ತದೆ. ಇದನ್ನು ತಿಳಿಯದವರು ಏನಾದರೂ ಮಾಡಲಿ. ನಾನು ಮಾತ್ರ ಇವುಗಳನ್ನು ಬೇಡುವದಿಲ್ಲ. ಗತಿಸಿಹೋದ ಸ್ತ್ರೀಪುತ್ರಾದಿಗಳ ರೂಪವನ್ನು ಅವರ ಜೊತೆಗಿನ ಸರಸ-ಸಲ್ಲಾಪಗಳನ್ನೂ ಆದರಿಂದ ಜನ್ಯವಾದ ಸುಖವನ್ನು ಸ್ಮರಿಸಿಕೊಳ್ಳುತ್ತಾ ಅವುಗಳನ್ನು ಪ್ರಸ್ತುತದಲ್ಲಿ ಅನುಭವಿಸಲಾಗದು ಎಂದು ತಿಳಿದು ದುಃಖಪಡುತ್ತಾನೆ ಜೀವ. ಅಂತಹ ಸುಖ ನನಗೆ ಬೇಡ. ಅತಿದೀರ್ಘಕಾಲ ಜೀವನಮಾಡುವವರಿಗೆ ಆಗುವ ದುಃಖ ವಿಚಿತ್ರ. ತಾನು ಬದುಕಿರುವಾಗಲೇ

ತನಗೆ ಬೇಕಾದ ಪದಾರ್ಥಗಳ ವಿನಾಶವಾಗುತ್ತವೆ. ವಿನಷ್ಟವಾದ ಪದಾರ್ಥಗಳನ್ನು ಸ್ಮರಿಸಿಕೊಳ್ಳುತ್ತಾ ದುಃಖಪಡುತ್ತಾನೆ ಜೀವ. ಆದ್ದರಿಂದ ದೀರ್ಘಜೀವನ ಪುರುಷಾರ್ಥವಲ್ಲ. ಕಿಂತು ಅನರ್ಥವಾಗಿದೆ. ಶ್ರೇಯಸ್ಕಾಮನಾದವನು ಅತಿದೀರ್ಘವಾದ ಬಾಳ್ವೆಯನ್ನು ಬಯಸುವದಿಲ್ಲ. ನಿವೃತ್ತವಾದ ಸುಖಗಳನ್ನು ನೆನಪಿಸಿಕೊಂಡು ದುಃಖಪಡುತ್ತಾ ಕೂಡುವದಿಲ್ಲ. ॥೧.೧.೨೮॥

ಯಸ್ಮಿನ್ನಿದಂ ವಿಚಿಕಿತ್ಸಂತಿ ಮೃತ್ಯೋ
ಸಾಂಪರಾಯೇ ಮಹತಿ ಬ್ರೂಹಿ ನಃ ತತ್ ।
ಯೋಽಯಂ ವರೋ ಗೂಢಮನುಪ್ರವಿಷ್ಟೋ
ನಾನ್ಯಂ ತಸ್ಮಾನ್ನಚಿಕೇತಾ ವೃಣೀತೇ ॥೧.೧.೨೯॥

ನಾನು ಶ್ರೇಯಸ್ಕಾಮನಾಗಿದ್ದೇನೆ. ಭಗವಂತನ ಸ್ವರೂಪವನ್ನೇ ತಿಳಿಯಬೇಕೆಂದು ಬಯಸಿದ್ದೇನೆ. ನಾನು ಪ್ರಾರ್ಥಿಸಿದ ಆ ವರವನ್ನು ಪೂರ್ಣಗೊಳಿಸಬೇಕೆಂದು ನಚಿಕೇತ ವಿನಂತಿಸಿಕೊಳ್ಳುತ್ತಿದ್ದಾನೆ.

ಯಾವ ವಿಷಯದಲ್ಲಿ ದೇವತೆಗಳಿಗೆ ವಿಚಿಕಿತ್ಸೆ ಇದೆಯೋ ಪ್ರೇತಪ್ರೇರಕತಯಾ ಭಗವಂತ ಇದ್ದಾನೆಯೋ ? ಇಲ್ಲವೋ ? ಎಂದು ಜನರಿಗೆ ಸಂದೇಹವಿದೆಯೋ ಅದೇ ಪ್ರೇತಪ್ರೇರಕನಾದ ಭಗವಂತನ ಸ್ವರೂಪವನ್ನು ಮುಕ್ತಿಯ ಪ್ರಾಪ್ತಿಗಾಗಿ ನನಗೆ ನೀವು ಉಪದೇಶ ಮಾಡಬೇಕು. ನಾನು ಕೇಳಿದ ಈ ವರ ಅತಿಗುಪ್ತವಾಗಿದೆ. ಇದನ್ನು ಮತ್ತಾರಿಂದಲೂ ಪಡೆಯಲಾಗುವದಿಲ್ಲ. ಆದ್ದರಿಂದ ನಚಿಕೇತ ಈ ವರವನ್ನು ಬಿಟ್ಟು ಮತ್ತೊಂದನ್ನು ಪ್ರಾರ್ಥಿಸುವದಿಲ್ಲ. ॥೧.೧.೨೯॥

॥ ಇತಿ ಶ್ರೀಕಾಠಕಭಾಷ್ಯೇ ಪ್ರಥಮೇಽಧ್ಯಾಯೇ ಪ್ರಥಮಾ ವಲ್ಲೀ ॥

## ॥ ಶ್ರೀಕಾಠಕಭಾಷ್ಯೇ ಪ್ರಥಮೇಽಧ್ಯಾಯೇ ದ್ವಿತಿಯಾ ವಲ್ಲೀ ॥

ಅನ್ಯತ್ ಶ್ರೇಯೋಽನ್ಯದುತೇವ ಪ್ರೇಯ-
ಸ್ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ ।
ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ
ಹೀಯತೇಽರ್ಥಾತ್ ಯ ಉ ಪ್ರೇಯೋ ವೃಣೀತೇ ॥

ನಚಿಕೇತನ ನಿಷ್ಠಾತಿಶಯವನ್ನು ಕಂಡ ಯಮದೇವರು ಅತ್ಯಂತ ಸಂತುಷ್ಟರಾದರು. ಬ್ರಹ್ಮವಿದ್ಯಾರೂಪವಾದ ಅಭೀಷ್ಟವರವನ್ನು ಪಡೆಯಲು ಇವನು ಯೋಗ್ಯನಾದ ಅಧಿಕಾರಿ ಎಂದು ಭಾವಿಸಿದರು. ನಚಿಕೇತನ ಶ್ರೇಯಸ್ಕಾಮತೆಯನ್ನು ಪ್ರಶಂಸಿಸಿದರು. ಪ್ರಾಪ್ತವಾದ ಪ್ರೇಯೋರೂಪವಾದ ಪುತ್ರಾದಿಗಳನ್ನು ಪರಿತ್ಯಜಿಸಿ ಶ್ರೇಯೋರೂಪವಾದ ಬ್ರಹ್ಮವಿದ್ಯೆಯನ್ನು ಪ್ರಾರ್ಥಿಸುವವರು ಎಲ್ಲರಿಂದಲೂ ಪ್ರಶಸ್ಯರಾಗುತ್ತಾರೆ ಎಂದು ತಿಳಿಸುತ್ತಾ ಶ್ರೇಯಸ್ಸು-ಪ್ರೇಯಸ್ಸುಗಳಲ್ಲಿ ವಿಶಿಷ್ಟ ಯಾವುದು ಎಂಬುದನ್ನು ಈ ಮಂತ್ರದಿಂದ ತಿಳಿಸಿದರು.

ಶ್ರೇಯಸ್ಸು ಎಂದರೆ ಬ್ರಹ್ಮವಿದ್ಯೆ ಎಂದು ಅರ್ಥ. ಇದು ನಿಶ್ರೇಯಸಕ್ಕೆ ಅರ್ಥಾತ್ ಮುಕ್ತಿಗೆ ಸಾಧನವಾಗಿದೆ. ಪ್ರೇಯಸ್ಸು ಎಂದರೆ ಪ್ರೀತಿವಿಷಯವಾದ ಪುತ್ರಾದಿಗಳು ಎಂದು ಅರ್ಥ. ಇದು ಬಂಧಕವಾಗಿದೆ. ಈ ಕಾರಣ ಶ್ರೇಯಸ್ಸು ಪ್ರೇಯಸ್ಸಿನಿಂದ ವಿಲಕ್ಷಣವಾಗಿದೆ. ಪ್ರೇಯಸ್ಸು ಕೂಡಾ ಶ್ರೇಯಸ್ಸಿನಿಂದ ವಿಲಕ್ಷಣವಾಗಿದೆ. ಮೋಕ್ಷ-ಮೋಕ್ಷೇತರವಾದ ಪುತ್ರಾದಿವಿಷಯ-ಗಳನ್ನು ಪಡೆಯುವಲ್ಲಿ ಇವುಗಳು ಪುರುಷನನ್ನು ಬಂಧಿಸುತ್ತವೆ. ಇವುಗಳಲ್ಲಿ ಶ್ರೇಯಸ್ಸನ್ನು ಪ್ರಾರ್ಥಿಸಿದವ ಮೋಕ್ಷಗಾಮಿಯಾಗುತ್ತಾನೆ. ಪ್ರೇಯಸ್ಸನ್ನು ಅಪೇಕ್ಷಿಸುವವನು ಮುಕ್ತಿಯಿಂದ ಚ್ಯುತನಾಗುತ್ತಾನೆ.

**ವಾದಿರಾಜೀಯವಿಶೇಷ** - ''ಅನ್ಯದುತೇವ ಪ್ರೇಯಃ'' ಎಂಬಲ್ಲಿಯ ''ಇವ'' ಎಂಬ ಶಬ್ದವು ಅತಿಮಹತ್ತ್ವವಾದ ಈ ವಿಷಯವನ್ನು ಪ್ರಸ್ತುತಪಡಿಸುತ್ತದೆ.

ವಿಷಯವಿರಕ್ತರಾದ ಬಹ್ಮಾದಿದೇವತೆಗಳಿಗೆ ಪ್ರಿಯವಾದ ಧನ-ವನಿತಾದಿಗಳು ಕೂಡಾ ವಿಷ್ಣುಪ್ರೀತಿಕರವಾದ ಯಾಗಾದಿಗಳಿಗೆ ಉಪಯುಕ್ತವಾಗಿರುವುದರಿಂದ ಪ್ರೇಯಸ್ಸು ಕೂಡಾ ಶ್ರೇಯಸ್ಸಿನಲ್ಲಿಯೇ ಅಂತರ್ಭೂತವಾಗುತ್ತವೆ. ಆದ್ದರಿಂದ ಅವರ ದೃಷ್ಟಿಯಲ್ಲಿ ಪ್ರೇಯೋ-ರೂಪವಾದ ಧನವನಿತಾದಿಗಳು ಶ್ರೇಯಸ್ಸಿನಿಂದ ಭಿನ್ನವಲ್ಲ.

ಹಿಂದೆ ತಿಳಿಸಿದಂತೆ ಪ್ರೇಯಸ್ಸು ಕೂಡಾ ಶ್ರೇಯಸ್ಸಿನಲ್ಲಿ ಅಂತರ್ಭೂತವಾಗುತ್ತದೆಂದು ತಿಳಿಯದವರು ಪ್ರೇಯಸ್ಸು ಉದರಭರಣರೂಪವಾದ ಐಹಿಕಫಲಕ್ಕೆ ಮಾತ್ರ ಸಾಧನವಾಗಿದೆ ಎಂದು ಬಲವಾಗಿ ನಂಬಿರುತ್ತಾರೆ. ಆದ್ದರಿಂದ ಪ್ರೇಯಸ್ಸು ಅವರಿಗೆ ಬಂಧಕವಾಗುತ್ತದೆ. ಹೀಗೆ ತಿಳಿದವನು ಪ್ರೇಯೋರೂಪವಾದ ವಿಷಯಗಳಲ್ಲಿ ಆದರ ಉಳ್ಳವನಾಗುತ್ತಾನೆ.

ಶ್ರೇಯಸ್ಸಾಧನವಾದ ಅಧ್ಯಯನ-ಅಧ್ಯಾಪನಾದಿಸತ್ಕರ್ಮಗಳು ಕೂಡಾ ಸ್ವೋದರಪೂರಣಕ್ಕಾಗಿ ಮಾಡುತ್ತಾನೆ. ಇಷ್ಟೇ ಅಲ್ಲದೇ ಮೋಕ್ಷೋಪಯೋಗಿಯಾದ ದೇವಾಲಯದಲ್ಲಿ ಮಾಡುವ ವಿಷ್ಣುವಿನ ಆರಾಧನಾದಿಗಳನ್ನೂ ಸ್ವೋದರಭರಣಕ್ಕಾಗಿ ಉಪಯೋಗಿಸಿಕೊಳ್ಳುತ್ತಾನೆ. ಆದ್ದರಿಂದ ಅಂಥವನಿಗೆ ಪ್ರೇಯೋಕರ್ಮದಂತೆ ಶ್ರೇಯೋರೂಪವಾದ ಕರ್ಮವೂ ಬಂಧಕವಾಗುತ್ತದೆ. ॥ ೧.೨.೧ ॥

ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತ-
ಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ ।
ಶ್ರೇಯೋ ಧೀರೋಽಭಿ ಪ್ರೇಯಸೋ ವೃಣೀತೇ
ಪ್ರೇಯೋ ಮಂದೋ ಯೋಗಕ್ಷೇಮಾನ್ ವೃಣೀತೇ ॥ ೧.೨.೨॥

ಶ್ರೇಯಸ್ಸು ಸಾಧುವಾದ ಮುಕ್ತಿಗೆ ಕಾರಣವಾಗಿದೆ. ಪ್ರೇಯಸ್ಸು ಸಂಸಾರಬಂಧಕವಾಗಿದೆ. ಆದ್ದರಿಂದ ಧೀರನಾದವನು ಇವುಗಳ ವಿವೇಕವನ್ನರಿತು ಶ್ರೇಯೋಮಾರ್ಗವನ್ನು ಅವಲಂಬಿಸಬೇಕು. ಇಷ್ಟನ್ನು ಈ ಮಂತ್ರ ಸ್ಪಷ್ಟಪಡಿಸುತ್ತದೆ.

ಜೀವರ ಕರ್ಮಕ್ಕೆ ಅನುಗುಣವಾಗಿ ಶ್ರೇಯಸ್ಸು ಮತ್ತು ಪ್ರೇಯಸ್ಸು ಮನುಷ್ಯರಿಗೆ ಲಬ್ಧವಾಗುತ್ತವೆ. ಇಂತಹ ಸಂದರ್ಭದಲ್ಲಿ ಧೀರನಾದವನು ಶ್ರೇಯಸ್ಸು ಯಾವುದು ಪ್ರೇಯಸ್ಸು ಯಾವುದು ಎಂದು ಸರಿಯಾಗಿ ವಿವೇಕಮಾಡಿಕೊಳ್ಳಬೇಕು. ಶ್ರೇಯಸ್ಸು ಪುರುಷಾರ್ಥಸಾಧನ, ಪ್ರೇಯಸ್ಸು ಬಂಧನಕ್ಕೆ ಕಾರಣ ಎಂದು ತಿಳಿದುಕೊಳ್ಳಬೇಕು. ಈ ರೀತಿಯಾಗಿ ವಿವೇಕ ಮಾಡಿಕೊಂಡ ನಂತರ ಧೀರನಾದವನು ಪ್ರೇಯೋರೂಪವಾದ ಪುತ್ರಾದಿವಿಷಯಗಳನ್ನು ಪರಿತ್ಯಜಿಸಿ ಶ್ರೇಯಸ್ಸನ್ನೇ ಪರಿಗ್ರಹಿಸುತ್ತಾನೆ. ಮಂದನಾದವನು ಯೋಗಕ್ಷೇಮರೂಪವಾದ ಪ್ರೇಯಸ್ಸನ್ನೇ ವರಿಸುತ್ತಾನೆ.

ಯೋಗ - ಸಿಗದಿರುವ ವಿಷಯವನ್ನು ಪಡೆಯುವುದು. ಕ್ಷೇಮ - ಪಡೆದುದನ್ನು ಸಂರಕ್ಷಿಸಿಕೊಳ್ಳುವುದು. ॥೧.೨.೨॥

ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ
ಕಾಮಾನ್ ಅಭಿಧ್ಯಾಯನ್ ನಚಿಕೇತೋಽತ್ಯಸ್ರಾಕ್ಷೀಃ ।
ನೈತಾಂ ಶೃಂಕಾಂ ವಿತ್ತಮಯೀಮವಾಪ್ತೋ
ಯಸ್ಯಾಂ ಮಜ್ಜಂತಿ ಬಹವೋ ಮನುಷ್ಯಾಃ ॥ ೧.೨.೩ ॥

ನಚಿಕೇತನನ್ನು ಪ್ರಶಂಸಿವುದಕ್ಕಾಗಿ ಶ್ರೇಯಸ್ಸಿನ, ಪ್ರೇಯಸ್ಸಿನ ಸ್ವರೂಪವನ್ನು ನಿರೂಪಿಸಲಾಗಿದೆ. ಈಗ ನಚಿಕೇತನ ಪ್ರಶಂಸೆಯನ್ನು ಯಮದೇವರು ಮಾಡುತ್ತಾರೆ.

ಹೇ ನಚಿಕೇತ ! ನಾನು ನಿನ್ನನ್ನು ಅನೇಕರೀತಿಯಾಗಿ ಪ್ರಲೋಭಿಸಿದೆ. ನೀನು ಆಯಾ ವಿಷಯಗಳಲ್ಲಿಯ ಅಸ್ಥಿರತ್ವ-ಬಂಧಕತ್ವ ಮೊದಲಾದ ದೋಷಗಳನ್ನು ವಿವೇಕಪೂರ್ವಕವಾಗಿ ತಿಳಿದುಕೊಂಡಿದ್ದಿ. ಶ್ರೇಯೋವರಣೈಕತತ್ಪರನಾದದ್ದರಿಂದ, ವಿತ್ತಮೋಹರಹಿತನಾದದ್ದರಿಂದ ಈ ಸುವರ್ಣಶೃಂಖಲಾವನ್ನು ಕೂಡಾ ನೀನು ಪರಿಗ್ರಹಿಸಲಿಲ್ಲ. ನಿನ್ನ ಪ್ರಲೋಭನೆಗೆ ತೋರಿಸಿದ ಈ ಸಂಕೊಲೆ ಸಾಮಾನ್ಯವಾದುದಲ್ಲ. ಇದನ್ನು ಪಡೆಯಲು ಮನುಷ್ಯರು ಮಗ್ನರಾಗುತ್ತಾರೆ. ॥ ೧.೨.೩ ॥

ದೂರಮೇತೇ ವಿಪರೀತೇ ವಿಷೂಚೀ
ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ ।
ವಿದ್ಯಾಭೀಪ್ಸಿತಂ ನಚಿಕೇತಸಂ ಮನ್ಯೇ
ನ ತ್ವಾ ಕಾಮಾ ಬಹವೋ ಲೋಲುಪಂತ ॥ ೧.೨.೪ ॥

"ಯೋಗಕ್ಷೇಮಾನ್" ಎಂಬ "ಸ ತ್ವಂ ಪ್ರಿಯಾನ್" ಎಂಬ ವಚನಗಳಿಂದ ಪ್ರೇಯೋಸ್ವರೂಪವು ನಿರೂಪಿತವಾಗಿದೆ. ಪ್ರಸ್ತುತ ಶ್ರೇಯಸ್ಸು ಹಾಗು ಪ್ರೇಯಸ್ಸು ಈ ಎರಡರ ಸ್ವರೂಪನ್ನು ನಿರೂಪಿಸುತ್ತದೆ ಈ ಮಂತ್ರ.

ಅವಿದ್ಯೆಯು ಪ್ರೇಯೋರೂಪವಾಗಿದೆ. ಇದು ವಿದ್ಯಾವಿರುದ್ಧವಾದುದೆಂದು ತಿಳಿಯಲ್ಪಟ್ಟಿದೆ. ವಿದ್ಯೆಯು ಶ್ರೇಯೋರೂಪವಾಗಿದೆ. ಈ ಶ್ರೇಯಸ್ಸು ಹಾಗು ಪ್ರೇಯಸ್ಸುಗಳು ವಿರುದ್ಧವಾದ ಗತಿಗೆ ಕಾರಣವಾದದ್ದರಿಂದ ಅತಿವಿರುದ್ಧವಾಗಿವೆ. ನಾನಾರೀತಿಯಾದ ಪ್ರಲೋಭಗಳನ್ನು ಮುಂದಿಟ್ಟರೂ ಅವುಗಳು ನಿನ್ನನ್ನು ವಿಚಲಿತಗೊಳಿಸಲಿಲ್ಲ. ಆದ್ದರಿಂದ ನಚಿಕೇತ ವಿದ್ಯೆಯನ್ನು ಅಪೇಕ್ಷಿಸುವವನೇ ಹೊರತು ಅವಿದ್ಯೆಯನ್ನಲ್ಲವೆಂಬುದನ್ನು ನಾನು ಮನಗಂಡಿದ್ದೇನೆ. ॥

ಅವಿದ್ಯಾಯಾಮಂತರೇ ವರ್ತಮಾನಾಃ
ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ ।
ದಂದ್ರಮ್ಯಮಾಣಾಃ ಪರಿಯಂತಿ ಮೂಢಾ
ಅಂಧೇನೈವ ನೀಯಮಾನಾ ಯಥಾಂಧಾಃ ॥೧.೨.೪॥

ಶ್ರೇಯಸ್ಸನ್ನು ಕಾಮಿಸುವವನು ಉತ್ತಮ ಎಂದು ಹೇಳಿ ಪ್ರೇಯಃಕಾಮನನ್ನು ನಿಂದಿಸುತ್ತದೆ ಈ ಮಂತ್ರ.

ಅಜ್ಞಾನಿಗಳು ಸ್ವಯಂ ತಮ್ಮನ್ನು ತಾವು ಧೀರರೆಂದು, ಪಂಡಿತರೆಂದು ಹೇಳಿಕೊಳ್ಳುತ್ತಾರೆ. ಆದರೆ ಪಾಂಡಿತ್ಯದ ಲೇಶವಿರುವುದಿಲ್ಲ. ವೃಕ್ಷಗಳಂತೆ ವ್ಯರ್ಥವಾಗಿ ಜೀವಿಸುತ್ತಾ ಪರ್ಯಟಿಸುತ್ತಾರೆ. ಇವರಿಗೆ ಪ್ರೇರಕರಾದವರೂ ಮೂಢರಾಗಿರುತ್ತಾರೆ. ಆದ್ದರಿಂದ

ಕುರುಡನನ್ನು ಬೆನ್ನು ಹತ್ತಿದ ಮತ್ತೊಬ್ಬ ಕುರುಡನಂತೆ ಗಮ್ಯಾಗಮ್ಯಪರಿಜ್ಞಾನಶೂನ್ಯ-ರಾಗುತ್ತಾರೆ. ಹೀಗಾಗಿ ಪ್ರತಿಯೊಂದು ಹೆಜ್ಜೆಗೂ ಅವರು ಎಡವುತ್ತಾರೆ. ॥ ೧.೨.೫ ॥

ನ ಸಾಂಪರಾಯಃ ಪ್ರತಿಭಾತಿ ಬಾಲಂ
ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್ ।
ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ
ಪುನಃ ಪುನರ್ವಶಮಾಪದ್ಯತೇ ಮೇ ॥ ೧.೨.೬ ॥

ನಿತ್ಯಪುಮರ್ಥವಾದ ಮೋಕ್ಷಸಾಧನವಾದ ಶ್ರೇಯಸ್ಸನ್ನು ಪರಿತ್ಯಜಿಸಿ ಕಾಮ್ಯವಾದ ಅನಿತ್ಯವಾದ ಪ್ರೇಯೋರೂಪವಾದ ಪುತ್ರಪೌತ್ರಾದಿವಿಷಯಗಳನ್ನು ಜೀವರು ಪ್ರಾರ್ಥಿಸುತ್ತಾರೆ. ಯಾಕೆಂದರೆ ಶ್ರೇಯಸ್ಸಾಧನನಾದ ಭಗವಂತನ ಪರಿಜ್ಞಾನ ಅವರಿಗಾಗುವದಿಲ್ಲ. ಇದನ್ನು ಈ ಮಂತ್ರ ತಿಳಿಸುತ್ತದೆ.

ಅಜ್ಞಾನಿಯಾದವನು ವಿಷಯಗಳ ಸಂಪಾದನೆಯಲ್ಲಿ ಮಗ್ನನಾಗುತ್ತಾನೆ. ಹೀಗಾಗಿ ವಿತ್ತವೇ ನಿತ್ಯವೆಂದು ಭಾವಿಸಿ ಮೂಢನಾಗುತ್ತಾನೆ. ಅಜ್ಞಾನಿಯಾದ, ಆದ್ದರಿಂದಲೆ ಬಾಲಕನಂತೆ ಇರುವ ಈ ಮನುಷ್ಯ ಮತ್ತೆ ಮತ್ತೆ ಪ್ರಮಾದಕ್ಕೆ ಗುರಿಯಾಗುತ್ತಾನೆ. ಮುಕ್ತಿಯಾಗಲೀ, ಮುಕ್ತಿಗೆ ಸಾಧನನಾದ ಭಗವಂತನಾಗಲೀ ಅಂಥವನಿಗೆ ತೋರುವದಿಲ್ಲ. ಭೂಲೋಕ ಒಂದೇ ಇದೆ, ಸ್ವರ್ಗಾದಿ ಆಮುಷ್ಮಿಕಲೋಕಗಳಾವೂ ಇಲ್ಲವೆಂದು, ಐಶ್ವರ್ಯವೇ ಸ್ಥಿರವೆಂದು ದುರಭಿಮಾನದಿಂದ ಯುಕ್ತನಾಗಿರುತ್ತಾನೆ. ಆದ್ದರಿಂದ ಅಂಥವನು ನನ್ನ ವಶನಾಗಿ ಪುನಃಪುನಃ ಯಮಯಾತನೆಯನ್ನು ಅನುಭವಿಸುತ್ತಾನೆ. ॥೧.೨.೬॥

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ
ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ ।
ಆಶ್ಚರ್ಯೋಽಸ್ಯ ವಕ್ತಾ ಕುಶಲೋಽಸ್ಯ ಲಬ್ಧಾ
ಆಶ್ಚರ್ಯೋ ಜ್ಞಾತಾ ಕುಶಾಲಾನುಶಿಷ್ಟಃ ॥೧.೨.೭॥

ಶ್ರವಣಾದಿಪ್ರಯತ್ನಗಳನ್ನು ಮಾಡುವವರಿಗೂ ಭಗವಂತ ತೋರುವದಿಲ್ಲವೆಂದಮೇಲೆ ಪ್ರಮಾದಯುಕ್ತನಾದವನಿಗೆ ಹೇಗೆ ತೋರುತ್ತಾನೆ ಎಂಬುವ ಕೈಮುತ್ಯವನ್ನು ಈ ಮಂತ್ರ ತಿಳಿಸುತ್ತದೆ.

ಹಲವರು ಪರಲೋಕವಿದೆ ಎಂದು ಐತಿಹ್ಯಮೊದಲಾದ ಪ್ರಮಾಣಗಳಿಂದ ತಿಳಿದು-ಕೊಂಡಿರುತ್ತಾರೆ. ಆದರೆ ಅದಕ್ಕೆ ನಿಯಾಮಕನಾದವನು ಒಬ್ಬನಿದ್ದಾನೆಂಬ ಪರಿಜ್ಞಾನ ಅವರಿಗಾಗುವುದಿಲ್ಲ. ನಿಯಾಮಕನ ಪರಿಜ್ಞಾನ ಆಕಸ್ಮಿಕವಾಗಿ ಆಗುವುದಿಲ್ಲ. ಅದಕ್ಕೆ ಜ್ಞಾನಿಗಳ ಉಪದೇಶ ಅವಶ್ಯವಾಗಿ ಬೇಕು. ನಿಯಾಮಕನ ಕಥಾಶ್ರವಣವೇ ಬಹಳ ಜನರಿಗೆ

ದುರ್ಲಭವಾಗಿದೆ. ಶ್ರವಣವಾದರೂ ಗುರೂಕ್ತಪ್ರಕಾರೇಣ ಮನನಾದಿಗಳನ್ನು ಮಾಡದಿದ್ದಾಗ ವಿಪರೀತಜ್ಞಾನವೇ ಆಗುತ್ತದೆ. ಹೊರತು ಯಥಾರ್ಥವಾಗಿ ಭಗವಂತನ ಪರಿಜ್ಞಾನವಾಗುವದಿಲ್ಲ. ಕೆಲವರಿಗೆ ಅವರ ಪುಣ್ಯವಿಶೇಷದಿಂದ ಸರ್ವನಿಯಾಮಕವಾದ ಭಗವತ್ತತ್ತ್ವದ ಶ್ರವಣವಾಗುತ್ತದೆ. ಯಥಾರ್ಥವಾದ ಪರಿಜ್ಞಾನವೂ ಅವರಿಗಾಗುತ್ತದೆ. ಆದರೆ ನಿಯಾಮಕನಾದವನು ಹೀಗಿಯೇ ಇದ್ದಾನೆಂದು ತಿಳಿಯಲಾಗುವದಿಲ್ಲ. ಹೀಗಿದ್ದಾನೆಂದು ತಿಳಿದರೂ ತಾನು ತಿಳಿದಿದ್ದನ್ನು ಹೇಳಲು ಬರುವದಿಲ್ಲ. ನಿಯಾಮಕನ ವಿಷಯವನ್ನು ತಿಳಿಸಲು ತನಗೆ ಬರುತ್ತಿದ್ದರೂ ತಾನು ಹೇಳಿದಂತೆ ಅದನ್ನು ತಿಳಿಯುವವರಂತೂ ಅತೀವ ದುರ್ಲಭರಾಗಿದ್ದಾರೆ. ಆದ್ದರಿಂದ ನಿಯಾಮಕನಾದ ಭಗವಂತನ ಜ್ಞಾನ ದುರ್ಲಭವೆಂದು ಶಾಸ್ತ್ರಗಳು ಪ್ರತಿಪಾದಿಸುತ್ತವೆ. ॥೧.೨.೭॥

ನ ನರೇಣಾವರಃ ಪ್ರೋಕ್ತ ಏಷ
ಸುಜ್ಞೇಯೋ ಬಹುಧಾ ಚಿಂತ್ಯಮಾನಃ ।
ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ
ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥೧.೨.೮॥

ಉಪನಿಷತ್ ಮೊದಲಾದವುಗಳಿಂದ ಕೆಲವರಿಗೆ ಬ್ರಹ್ಮನ ಜ್ಞಾನವಾಗಿರುತ್ತದೆ. ಶೈವಾದಿ ಶಾಸ್ತ್ರವ್ಯಾಖ್ಯಾತೃಗಳು ಬೇಕಾದಷ್ಟು ಜನರಿದ್ದಾರೆ ಅವರು ತತ್ತ್ವವನ್ನು ತಿಳಿಸುತ್ತಾರೆ. ಆದ್ದರಿಂದ ವಕ್ತಾ ದುರ್ಲಭನೆಂದು ಹೇಗೆ ಹೇಳಿದಿರಿ ಎಂಬ ಸಮಸ್ಯೆಯನ್ನು ಎತ್ತಿಕೊಂಡು ವಕ್ತೃದೌರ್ಲಭ್ಯವನ್ನೆ ಈ ಮಂತ್ರ ಸ್ಪಷ್ಟಪಡಿಸುತ್ತದೆ.

ಪರಬ್ರಹ್ಮ ಜೀವನಿಂದ ಅಭಿನ್ನನೆಂದು, ನಿರ್ಗುಣನೆಂದು, ನಿರ್ವಿಶೇಷನೆಂದು, ಭಿನ್ನಾಭಿನ್ನನೆಂದು, ಅಪ್ಪಗುಣನೆಂದು, ನಿಷ್ಕ್ರಿಯನೆಂದು, ಅವ್ಯಾಪಕನೆಂದು ಹೀಗೆ ಬಹುಧಾ-ಅನೇಕರೀತಿಯಾಗಿ ತಮಗೆ ತೋರಿದಂತೆ ಶೈವಾದಿಗಳು ಚಿಂತಿಸುತ್ತಾರೆ. ಆದ್ದರಿಂದ ಅಂಥವರಿಂದ ಭಗವಂತನ ಯಥಾರ್ಥಜ್ಞಾನ ಪಡೆಯಲಾಗದು. ಅವರ ಉಪದೇಶದಿಂದ ವಿಪರೀತಜ್ಞಾನದ ಸಂಪ್ರಾಪ್ತಿಯೇ ಪುಷ್ಕಲವಾಗುತ್ತದೆ.

''ನಾನು ದುಃಖಿಯಾಗಿದ್ದೇನೆ'' ''ಅಲ್ಪಜ್ಞಾನಿಯಾಗಿದ್ದೇನೆ'' ಎಂಬ ಅನುಭವ ಜೀವನಿಗೆ ಯಾವಾಗಲೂ ಇರುತ್ತದೆ. ಪರಬ್ರಹ್ಮನು ಸಾರ್ವಜ್ಞಾದಿಗುಣಗಣಗಳಿಂದ ವಿಶಿಷ್ಟನಾಗಿ ಇರುವನೆಂದು ಶ್ರುತಿತತಿಗಳು ಬೋಧಿಸುತ್ತವೆ. ಆದ್ದರಿಂದ ಜೀವಬ್ರಹ್ಮರು ಪರಸ್ಪರ ಅತ್ಯಂತ ವಿಲಕ್ಷಣರಾಗಿದ್ದಾರೆ. ಹೀಗಿದ್ದರೂ ಭಗವಂತನಿಂದ ನಾನು ಭಿನ್ನನಾಗಿದ್ದೇನೆ ಎಂಬುದನ್ನು ಅರಿಯದವರು ಅನನ್ಯರು, ಅರ್ಥಾತ್ ಅದ್ವೈತಿಗಳು. ಭಗವಂತನಿಂದ ನಾನು ಅನನ್ಯ ಅರ್ಥಾತ್ ಅಭಿನ್ನ ಎಂದು ತಿಳಿದದ್ದರಿಂದ ಅವರು ಅನನ್ಯರು. ಇವರ ಉಪದೇಶದಿಂದ ತತ್ತ್ವಜ್ಞಾನವಾಗುವದಿಲ್ಲ. ಅಂಥವರ ವಚನಗಳು ಭ್ರಾಂತಿಮೂಲಕವಾಗಿವೆ. ಹೀಗೆ ಸರಿಯಾಗಿ

ತತ್ತ್ವವನ್ನು ಉಪದೇಶಿಸುವವರು ಯಾರೂ ಇಲ್ಲ. ಆದ್ದರಿಂದ ಆಗಮಗಳ ಮುಖಾಂತರ ತತ್ತ್ವಜ್ಞಾನವಾಗುವದಿಲ್ಲ.

ಆಗಮಗಳ ಮೂಲಕ ತತ್ತ್ವಜ್ಞಾನವಾಗದಿದ್ದರೂ ಪ್ರತ್ಯಕ್ಷದಿಂದ, ತರ್ಕದಿಂದ ಭಗವಂತನನ್ನು ತಿಳಿಯುತ್ತೇವೆ ಎಂದು ಸಾಹಸ ಮಾಡಲು ಬರುವದಿಲ್ಲ. ಭಗವಂತ ಅಣುಪರಿಮಾಣಕ್ಕಿಂತಲೂ ಅಣುವಾಗಿದ್ದಾನೆ. ಅರ್ಥಾತ್ ಸೂಕ್ಷ್ಮನಾಗಿದ್ದಾನೆ. ಅವ್ಯಕ್ತಸ್ವಭಾವದವನಾಗಿದ್ದಾನೆ. ಆದ್ದರಿಂದ ಪ್ರತ್ಯಕ್ಷದಿಂದ ಭಗವಂತನನ್ನು ತಿಳಿಯಲಾಗದು. ಭಗವಂತ ಅಣುವಿಗಿಂತ ಅಣುವಾಗಿದ್ದರೂ ಮಹತ್ತಾದ ರೂಪವೂ ಅವನಿಗೆ ಇದೆ. ಆದ್ದರಿಂದ ಪ್ರತ್ಯಕ್ಷದಿಂದ ಭಗವಂತನನ್ನು ತಿಳಿಯಬಹುದು ಎಂದು ತೋರುತ್ತದೆ. ಇದು ಕೂಡಾ ಸರಿಯಲ್ಲ. ಯಾಕೆಂದರೆ ಅವನ ಮಹತ್ತ್ವ ಮಿತಿಮೀರಿದ್ದು. ಮಿತಿಮೀರಿದ ಮಹತ್ತ್ವವೂ ಅತೀಂದ್ರಿಯವಾಗಿದೆ. ಆದ್ದರಿಂದ ಸರ್ವಥಾ ಪ್ರತ್ಯಕ್ಷಗೋಚರನಾಗುವದಿಲ್ಲ ಭಗವಂತ. ತರ್ಕಕ್ಕೆ ಭಗವಂತ ನಿಲುಕುವದಿಲ್ಲ. ಆದ್ದರಿಂದ ಪ್ರತ್ಯಕ್ಷ-ತರ್ಕ ಇವುಗಳಿಂದ ಭಗವಂತನ ಪರಿಜ್ಞಾನವಾಗದೆ ಇದ್ದುದರಿಂದ ಆಗಮದಿಂದಲೇ ಅವನನ್ನು ತಿಳಿಯಬೇಕು. ಆಗಮವನ್ನು ಬೋಧಿಸುವವರು ದುರ್ಲಭ-ರಾಗಿದ್ದಾರೆ ಆದ್ದರಿಂದ ಭಗವಂತನ ಜ್ಞಾನ ದುರ್ಲಭವಾಗಿದೆ.

ಆದರೆ ಸೂಕ್ಷ್ಮವಾದ ಪ್ರಮಾಣಗಳನ್ನು ತಿಳಿದವರಿಂದಲೇ ಸೂಕ್ಷ್ಮರೂಪನಾದ ಪರಬ್ರಹ್ಮನ ಅತರ್ಕ್ಯವಾದ ರೂಪವು ಜ್ಞೇಯವಾಗುತ್ತದೆ. ಅಂಥವರಿಂದಲೆ ಭಗವತ್ತತ್ತ್ವವನ್ನು ಶ್ರದ್ಧೆಯಿಂದ ತಿಳಿದುಕೊಳ್ಳಬೇಕು. ॥೧.೨.೮॥

ನೈಷಾ ತರ್ಕೇಣ ಮತಿರಾಪನೇಯಾ
ಪ್ರೋಕ್ತಾನ್ಯೇನೈವ ಸುಜ್ಞಾನಾಯ ಪ್ರೇಷ್ಠ ।
ಯಾಂ ತ್ವಮಾಪಃ ಸತ್ಯಧೃತಿರ್ಬತಾಽಸಿ
ತ್ವಾದೃಙ್ ನೋ ಭೂಯಾನ್ನಚಿಕೇತಃ ಪ್ರಷ್ಟಾ ॥೧.೨.೯॥

ಭಗವಂತನ ವಿಷಯದಲ್ಲಿ ಆಗಮ-ಪ್ರತ್ಯಕ್ಷ-ಅನುಮಾನಗಳಿಲ್ಲವೆಂದಾದರೆ ಭಗವಂತನ ಜ್ಞಾನವನ್ನು ಸಂಪಾದಿಸಲು ಯಾವ ಉಪಾಯವೂ ಇಲ್ಲವೆಂದಾಯಿತು. ಜ್ಞಾನದ ಸಂಪ್ರಾಪ್ತಿ ಇಲ್ಲದಿದ್ದುದರಿಂದ ಮೋಕ್ಷವೂ ಇಲ್ಲನೆಂದಾಗುತ್ತದೆ. ಶಾಸ್ತ್ರವು ವ್ಯರ್ಥವೆಂದು ಆಗಬೇಕಾಗುತ್ತದೆ ಎಂಬ ಶಂಕೆಗೆ ಸಮಾಧಾನವಾಗುತ್ತದೆ ಈ ಮಂತ್ರ.

ಭಗವದ್ವಿಷಯಕವಾದ ಮತಿಯನ್ನು ಕೇವಲತರ್ಕದಿಂದ ಸಂಪಾದಿಸಲಾಗುವದಿಲ್ಲ. ತರ್ಕದಿಂದ ಭಗವದ್ವಿಷಯಕವಾದ ವಿಚಾರವನ್ನು ನಿರಾಕರಿಸುವದೂ ಸಾಧ್ಯವಿಲ್ಲ. ಪ್ರತ್ಯಕ್ಷದ, ಆಗಮದ ಸಹಕಾರವಿಲ್ಲದಿರುವ ತರ್ಕವು ಪ್ರತಿಪಕ್ಷಾದಿಗಳಿಂದ ಗ್ರಸ್ತವಾಗಿರುತ್ತದೆ. ಆದ್ದರಿಂದ ಅಂತಹ ಅನುಮಾನ ಅಪ್ರಮಾಣವಾಗುತ್ತದೆ. ಆಗಮಗಳನ್ನು ಯಥಾರ್ಥವಾಗಿ ತಿಳಿಯದವರಿಂದ ಆಗಮಾನುಗ್ರಹವಿರುವ ತರ್ಕಗಳನ್ನು ತಿಳಿಯಲಾಗುವದಿಲ್ಲ.

ಹೇ ನಚಿಕೇತ ! ನೀನು ಮಾತ್ರ ನನ್ನ ಪ್ರೀತಿಗೆ ಪಾತ್ರನಾಗಿದ್ದಿ. ನೀನು ಈ ವಿಷಯವನ್ನು ತಿಳಿದುಕೋ. ''ಅನ್ಯ'' ಎಂದರೆ ಭೇದವನ್ನು ತಿಳಿದವರು ಎಂದು ಅರ್ಥ. ಭಗವಂತನಿಗೆ, ಜೀವರಾಶಿಗಳಿಗೆ, ಜಗತ್ತಿಗೆ ಭೇದವನ್ನು ತಿಳಿದವರು ಅನ್ಯರು. ಇವರು ಮಾತ್ರ ಪರಬ್ರಹ್ಮನ ವಿಚಾರವನ್ನು ಯಥಾರ್ಥವಾಗಿ ತಿಳಿಸಲು ಸಮರ್ಥರಾಗುತ್ತಾರೆ. ಅವರು ಮಾಡುವ ವೇದಾದಿಗಳ ಪಾಠಪ್ರವಚನಗಳಿಂದ ಉತ್ಪಾದಿತವಾದ ಮತಿಯು ಭಗವಂತನ ಸಾಕ್ಷಾತ್ಕಾರಕ್ಕೆ ಸಮರ್ಥವಾಗುತ್ತದೆ. ಭೇದವನ್ನು ತಿಳಿದವನು ಮಾತ್ರ ಯಥಾರ್ಥವಾದ ತತ್ತ್ವಜ್ಞಾನವನ್ನು ಸಂಪಾದಿಸಲು ಅರ್ಹನಾಗುತ್ತಾನೆ. ಇಂತಹ ತತ್ತ್ವಜ್ಞಾನವನ್ನು ನೀನು ಪಡೆದಿದ್ದಿ. ಆದ್ದರಿಂದ ನಿನ್ನ ಧೈರ್ಯ ಅಚಂಚಲವಾಗಿದೆ. ನಿನಗೆ ಸಮಾನನಾಗಿರುವ ಪ್ರಾಶ್ನಿಕ ದುರ್ಲಭನಾಗಿದ್ದಾನೆ. ॥೧.೨.೯॥

**ಜಾನಾಮ್ಯಹಂ ಶೇವಧಿರಿತ್ಯನಿತ್ಯಂ**
**ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ ।**
**ತತೋ ಮಯಾ ನಾಚಿಕೇತಶ್ಚಿತೋಽಗ್ನಿಃ**
**ಅನಿತ್ಯದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್ ॥೧.೨.೧೦॥**

ನಚಿಕೇತ ಮಾಡಿದ ಪ್ರಶ್ನೆಯನ್ನು, ಅದಕ್ಕೆ ಉತ್ತರವನ್ನು ಯಮದೇವರು ತಿಳಿದಿದ್ದಾರೆ. ಅದನ್ನು ಹೇಗೆ ತಿಳಿದಿದ್ದಾರೆಂಬುದನ್ನು ಈ ಮಂತ್ರ ಸ್ಪಷ್ಟಪಡಿಸುತ್ತದೆ.

''ಅನಿತ್ಯದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್'' ಎಂಬ ವಚನದಿಂದ ಅನಿತ್ಯವಾದ ದ್ರವ್ಯಗಳಿಂದ ನಿತ್ಯನಾದ ಪರಮಾತ್ಮನನ್ನು ನಾನು ಪಡೆದಿದ್ದೇನೆ ಎಂಬುದನ್ನು ಯಮದೇವರು ಹೇಳುತ್ತಿದ್ದಾರೆಂದು ಮೇಲ್ನೋಟಕ್ಕೆ ಇಲ್ಲಿ ಅರ್ಥ ತೋರುತ್ತದೆ. ಈ ಮಾತು ''ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್'' ಎಂಬ ಉತ್ತರವಚನದಿಂದ ವಿರುದ್ಧವಾಗಿದೆ. ಆದ್ದರಿಂದ ಇಲ್ಲಿಯ ಮಾತನ್ನು ಭಾಷ್ಯದ ಆಧಾರದಿಂದ ನಾವು ತಿಳಿದುಕೊಳ್ಳಬೇಕು. ಈ ಮಂತ್ರದ ಅರ್ಥವಿದು.

ನಿನ್ನ ಪ್ರಶ್ನೆಗೆ ಉತ್ತರಿಸಲಾಗದೇ ನಿನ್ನನ್ನು ಪ್ರಲೋಭಗೊಳಿಸಲಿಲ್ಲ. ಕಿಂತು ನಿನ್ನನ್ನು ಪರೀಕ್ಷಿಸುವ ಉದ್ದೇಶದಿಂದ ಪ್ರಲೋಭಗೊಳಿಸಿದ್ದೇನೆ. ನಿನ್ನ ಪ್ರಶ್ನೆಗೆ ಉತ್ತರವನ್ನು ನಾನು ತಿಳಿದಿದ್ದೇನೆ. ಅ-ಅಕಾರವಾಚ್ಯನಾದ ನಿತ್ಯಮ್-ನಿತ್ಯನಾದ ಭಗವಂತ ಶೇವಧಿಃ-ಸುಖನಿಧಿ ಯಾಗಿದ್ದಾನೆಂದು ಪರಮಪುರುಷಾರ್ಥಹೇತುವಾಗಿದ್ದಾನೆಂದು ನಾನು ತಿಳಿದಿದ್ದೇನೆ. ಧ್ರುವಮ್-ಧ್ರುವನಾದ, ನಿತ್ಯನಾದ ಭಗವಂತ, ಅ-ಧ್ರುವೈಃ-ಬ್ರಹ್ಮಜ್ಞಾನ ಮತ್ತು ಭಕ್ತಿದಾರ್ಢ್ಯ-ವಿಲ್ಲದವರಿಂದ ಪ್ರಾಪ್ಯನಲ್ಲ. ಇದನ್ನು ತಿಳಿದಿರುವ ನಾನು ಅ-ನಿತ್ಯ-ನಿತ್ಯನಾದ ಅಕಾರವಾಚ್ಯನಾದ ವಿಷ್ಣುವಿಷಯಕವಾಗಿರುವ ಮನಸ್ಸು ಮೊದಲಾದ ದ್ರವ್ಯಗಳಿಂದ ನಾಚಿಕೇತಾಗ್ನಿಯನ್ನು ಚಯನ ಮಾಡಿದ್ದೇನೆ. ಕೇವಲ ನಾಚಿಕೇತಾಗ್ನಿಯ ಚಯನದಿಂದ

ಭಗವತ್ಪ್ರಾಪ್ತಿಯಾಗುವದಿಲ್ಲ. ಕಿಂತು ಸರ್ವದಾ ನಿರ್ದೋಷನಾದ, ಗುಣಪೂರ್ಣನಾದ, ಜೀವಭಿನ್ನನಾದ, ನಿತ್ಯನಾದ ಭಗವಂತನಲ್ಲಿ ನಿಷ್ಠವಾದ ಮನಸ್ಸು ಮೊದಲಾದ ಕರಣಗಳಿಂದ ಅನುಷ್ಠಿತವಾದ ಯಾಗಾದಿಗಳು ಭಗವತ್ಪ್ರಾಪ್ತಿಗೆ ಕಾರಣವಾಗುತ್ತವೆ. ಈ ರೀತಿಯಾಗಿ ಅನುಷ್ಠಾನಮಾಡಿ ನಿತ್ಯನಾದ ಭಗವಂತನನ್ನು ನಾನು ಪಡೆದಿದ್ದೇನೆ.

''ಅಕಾರೋ ವಿಷ್ಣುವಾಚಕಃ'' ಎಂಬ ವಚನದಿಂದ ''ಅ'' ಎಂದರೆ ಭಗವಂತ ಎಂದು ಅರ್ಥ. ''ಅ-ನಿತ್ಯೈಃ'' ನಿತ್ಯವೂ ಭಗವದ್ವಿಷಯಕವಾದ ಮನಸ್ಸು ಮೊದಲಾದ ಕರಣಗಳಿಂದ ನಿತ್ಯಂ ಪ್ರಾಪ್ತವಾನಸ್ಮಿ-ನಿತ್ಯನಾದ ಭಗವಂತನನ್ನು ಪಡೆಯಬಹುದು. ''ಧ್ರುವ'' ಎಂದರೆ ಭಗವಂತ ಎಂತಲೆ ಅರ್ಥ. ''ಅ-ಧ್ರುವೈಃ'' ವಿಷ್ಣುವಿಷಯಕವಾಗದ ಕರಣಗಳಿಂದ ಮತ್ತು ಪುರುಷರಿಂದ, **ಧ್ರುವಂ ತತ್ ನ ಪ್ರಾಪ್ಯತೇ-** ಶ್ರೀಹರಿಯನ್ನು ಸರ್ವಥಾ ಪಡೆಯಲಾಗುವದಿಲ್ಲ. ನಿತ್ಯವೂ ನಿರ್ದುಷ್ಟನಾದ, ಗುಣಪೂರ್ಣನಾದ, ಸಕಲಚರಾಚರಪ್ರಪಂಚದಿಂದ ಭಿನ್ನನಾದ, ಸದಾತನನಾದ ಭಗವಂತನನ್ನು ವಿಷಯೀಕರಿಸುವ ಮನಸ್ಸು ಮೊದಲಾದವುಗಳನ್ನು ಮುಂದೆ ಮಾಡಿ ಅನುಷ್ಠಾನ ಮಾಡಿದ ಅಗ್ನಿಚಯನಾದಿಗಳಿಂದ ಪರಮಾತ್ಮನನ್ನು ಪಡೆಯಬಹುದು.

''ಜಾನಾಮ್ಯಹಂ ಶೇವಧಿಃ'' ಎಂಬ ಮಂತ್ರವನ್ನು ಅದ್ವೈತಿಗಳು ಈ ರೀತಿಯಾಗಿ ವ್ಯಾಖ್ಯಾನಮಾಡುತ್ತಾರೆ.

''ಶೇವಧಿಃ ಅರ್ಥಾತ್ ಕರ್ಮಫಲರೂಪವಾದ ನಿಧಿ ಇದು ಅನಿತ್ಯವೆಂದು ನಾನು ತಿಳಿದಿದ್ದೇನೆ. ಯಾಕೆಂದರೆ ಅನಿತ್ಯವಾದ ಅಧ್ರುವವಾದ ಪದಾರ್ಥಗಳಿಂದ ನಿತ್ಯನಾದ ಪರಬ್ರಹ್ಮರೂಪವಾದ ನಿಧಿಯ ಪ್ರಾಪ್ತಿಯಾಗುವದಿಲ್ಲ. ಅನಿತ್ಯಸುಖಾತ್ಮಕವಾದ ನಿಧಿಯು ಅನಿತ್ಯದ್ರವ್ಯಗಳಿಂದ ಪ್ರಾಪ್ಯವಾಗುತ್ತದೆ.

ಅನಿತ್ಯವಾದ ಸಾಧನಗಳಿಂದ ನಿತ್ಯವಾದುದ್ದರ ಪ್ರಾಪ್ತಿಯಾಗುವದಿಲ್ಲವೆಂದು ನಾನು ತಿಳಿದಿದ್ದರೂ ಅನಿತ್ಯವಾದ ಪಶು ಮೊದಲಾದ ದ್ರವ್ಯಗಳಿಂದ ಸ್ವರ್ಗಸಾಧನವಾದ ನಾಚಿಕೇತಾಗ್ನಿಯ ಚಯನವನ್ನು ಮಾಡಿದ್ದೇನೆ. ಆದ್ದರಿಂದ ನಾನು ಈ ಅಧಿಕಾರಕ್ಕೆ ಬಂದಿದ್ದೇನೆ. ಸ್ವರ್ಗಾಖ್ಯ ಈ ಯಾಮ್ಯಸ್ಥಾನ ಶಾಶ್ವತವಲ್ಲ ಇದರ ನಿತ್ಯತ್ವ ಆಪೇಕ್ಷಿಕ.''

ಈ ವಿವರಣೆ ಸರಿಯಾದುದಲ್ಲ. ಯಾಕೆಂದರೆ ನಚಿಕೇತ ಪ್ರಶ್ನಿಸಿದ ಬ್ರಹ್ಮಸ್ವರೂಪವನ್ನು ಯಮದೇವರು ಉಪದೇಶಮಾಡದೇ ಕರ್ಮಫಲ ಅನಿತ್ಯವೆಂದು ಹೇಳುವದು ಅಸಂಗತವಾಗಿದೆ. ಆದ್ದರಿಂದ ಈ ಮಂತ್ರ ಬ್ರಹ್ಮಪರವೆಂದೇ ಹೇಳಬೇಕು. ಬ್ರಹ್ಮಪರವಾದ ಅರ್ಥವನ್ನು ತಿಳಿದಿದ್ದೇವೆ.

ಮತ್ತೊಂದು ವಿಶೇಷವನ್ನು ನಾವಿಲ್ಲಿ ಗಮನಿಸಬೇಕು. ಯಾಮ್ಯಸ್ಥಾನವೂ ಜ್ಞಾನಮಾತ್ರ ಸಾಧ್ಯವಾಗಿದೆ. ವಿನಾಶಿದ್ರವ್ಯಾನುಷ್ಠಿತವಾದ ಅಗ್ನಿಚಯನಮಾತ್ರದಿಂದ ಸಾಧ್ಯವಲ್ಲ. ಮತ್ತು

"ಸ್ವರ್ಗ್ಯಮಗ್ನಿಮ್" ಎಂಬಲ್ಲಿ ಅಗ್ನಿಚಯನವಿದು ಸ್ವರ್ಗಸಾಧನತ್ವೇನ ಉಕ್ತವಾಗಿದೆ ಯಾಮ್ಯ-ಸ್ಥಾನಪ್ರಾಪ್ತಿಗೆ ಸಾಧನವೆಂದು ಉಕ್ತವಾಗಿಲ್ಲ. ಯಮಸ್ಥಾನವನ್ನು ಸ್ವರ್ಗವೆಂದು ಯಾರೂ ವ್ಯವಹರಿಸುವದಿಲ್ಲ. ಆದ್ದರಿಂದ ಈ ವಿಷಯಗಳೆಲ್ಲ ಕಲ್ಪನಾವಿಲಾಸಗಳೆ ಹೊರತು ಸತ್ಯವಲ್ಲ.

ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ
ಕ್ರತೋರಾನಂತ್ಯಮಭಯಸ್ಯ ಪಾರಮ್ ।
ಸ್ತೋಮಮಹದುರುಗಾಯಂ ಪ್ರತಿಷ್ಠಾಂ
ದೃಷ್ಟ್ವಾ ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥೧.೨.೧೧॥

ನಾನು ಮಾತ್ರ ಬ್ರಹ್ಮನನ್ನು ತಿಳಿದಿದ್ದೇನೆ ಎಂದಲ್ಲ, ನನ್ನ ಅನುಗ್ರಹದಿಂದ ನೀನು ಕೂಡಾ ಬ್ರಹ್ಮನನ್ನು ತಿಳಿಯುತ್ತೀ ಎಂದು ಈ ಮಂತ್ರದಿಂದ ಯಮದೇವರು ಹೇಳುತ್ತಿದ್ದಾರೆ.

ಪ್ರಿಯವಾದ ಕಾಮನೆಗಳನ್ನೆಲ್ಲ ನಚಿಕೇತ ಬದಿಗೆ ಸರಿಸಿದ. ಅನಂತಲೋಕಾಪ್ತಿಯೇ ಅದಕ್ಕೆ ಕಾರಣವೆಂದು ಹಿಂದೆ ತಿಳಿಸಿದೆ. ಮುಕ್ತನಿಯಾಮಕವಾದ ಭಗವತ್ಸ್ವರೂಪಜ್ಞಾನವೇ ಕಾಮನೆಗಳ ಪರಿತ್ಯಾಗಕ್ಕೆ ಮೂಲಕಾರಣವೆಂಬ ಅಭಿಪ್ರಾಯವನ್ನು ಈ ಮಂತ್ರ ವ್ಯಕ್ತಪಡಿಸುತ್ತದೆ.

ಹೇ ನಚಿಕೇತ ! ನೀನು ಭಗವಂತನನ್ನು ಸಾಮಾನ್ಯವಾಗಿ ತಿಳಿದಿದ್ದರಿಂದ, ವಿಶೇಷವಾಗಿ ಭಗವಂತನನ್ನು ತಿಳಿದುಕೊಳ್ಳುವುದಕ್ಕಾಗಿ ಕ್ಷುದ್ರವಾದ, ಅಶಾಶ್ವತವಾದ ಕಾಮನೆಗಳನ್ನು ಪರಿತ್ಯಜಿಸಿದ್ದಿ. ಆ ಭಗವಂತನ ಸ್ವರೂಪವನ್ನು ಸಂಕ್ಷೇಪವಾಗಿ ನಿನಗೆ ತಿಳಿಸುತ್ತೇನೆ. ಅದನ್ನು ಆಲಿಸು. ಪರಮಾತ್ಮ ಸ್ವರ್ಗಲೋಕದ ಧಾರಕನಾಗಿದ್ದಾನೆ. ಭಗವತ್ಪೂಜಾತ್ಮಕವಾದ ಸತ್ಕರ್ಮಗಳಿಗೆ, ಭಗವದ್ವಿಷಯವಾದ ಜ್ಞಾನಕ್ಕೆ ಅಕ್ಷಯವಾದ ಫಲವನ್ನು ಕೊಡುವವನಾಗಿದ್ದಾನೆ. ಮೋಕ್ಷಕ್ಕೆ ಹೇತುವಾಗಿದ್ದಾನೆ. ಸ್ತೋತ್ರಕ್ಕೆ ಸಾಧನವಾದ ಸಕಲವೇದಗಳಿಂದ ಮುಖ್ಯತಯಾ ಪ್ರತಿಪಾದ್ಯನಾಗಿದ್ದಾನೆ. ಸಾಕಲ್ಯೇನ ಪರಮಾತ್ಮನನ್ನು ಪ್ರತಿಪಾದಿಸಲು ವೇದಗಳು ಅಸಮರ್ಥವಾಗಿವೆ. ಬ್ರಹ್ಮಾದಿದೇವತೆಗಳಿಂದ, ಮುಮುಕ್ಷುಗಳಿಂದ ಮುಖ್ಯನೆಂದು ಗೇಯನಾಗಿದ್ದಾನೆ. ಮುಕ್ತರಿಗೆಲ್ಲ ಮುಖ್ಯಾಶ್ರಯನಾಗಿದ್ದಾನೆ. ॥೧.೨.೧೧॥

ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ
ಗುಹಾಹಿತಂ ಗಹ್ವರೇಷ್ಠಂ ಪುರಾಣಮ್ ।
ಅಧ್ಯಾತ್ಮಯೋಗಾಧಿಗಮೇನ ದೇವಂ
ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥೧.೨.೧೨॥

ಪರಮಾತ್ಮನನ್ನು ತಿಳಿದವರೆಲ್ಲರೂ ನಿನ್ನಂತೆಯೇ ಲೌಕಿಕವಾದ ವಿಷಯಗಳನ್ನು ತುಚ್ಛೀ-ಕರಿಸುತ್ತಾರೆ. ಆದ್ದರಿಂದ ಹರ್ಷಶೋಕಗಳನ್ನು ಪರಿತ್ಯಜಿಸುತ್ತಾರೆ. ಇದನ್ನು ಈ ಮಂತ್ರ ತಿಳಿಸುತ್ತದೆ.

ಪರಮಾತ್ಮ ಗಹ್ವರೇಷ್ಠನಾಗಿದ್ದಾನೆ ಅರ್ಥಾತ್ ಮುಕ್ತಜೀವರಲ್ಲಿದ್ದಾನೆ. ಮುಕ್ತರಾದ ಜೀವರ ಹೃದಯಗುಹಾದಲ್ಲಿ ಸ್ಥಿತನಾಗಿ ನಿಯಾಮಕನಾಗಿದ್ದಾನೆ. ಆದ್ದರಿಂದಲೆ ನಿಗೂಢನಾಗಿದ್ದಾನೆ. ಆದ್ದರಿಂದಲೆ ಅವನ ದರ್ಶನ ದುರ್ಲಭವಾಗಿದೆ. ಸನಾತನನಾಗಿದ್ದಾನೆ. ಅವನಿಗೆ ಆದಿ ಇಲ್ಲ, ಅಂತವೂ ಇಲ್ಲ. ಕ್ರೀಡಾದಿಗುಣಸಂಪನ್ನನಾಗಿದ್ದಾನೆ. ಇಂತಹ ಭಗವಂತನನ್ನು ಧ್ಯಾನಮಾಡಿದ ಅಧಿಕಾರಿಯು ಅಧಿಕಾತ್ಮನಾದ ಭಗವಂತನ ಅಪರೋಕ್ಷಜ್ಞಾನವನ್ನು ಪಡೆಯುವ ಮೂಲಕ ಹರ್ಷಶೋಕರೂಪವಾದ ಸಂಸಾರವನ್ನು ಪರಿತ್ಯಜಿಸುತ್ತಾನೆ. ॥೧.೨.೧೨॥

**ವೇದೇಶೀಯವಿಶೇಷ-** ''ಗಹ್ವರೇಷ್ಠಮ್'' ಎಂಬುದಕ್ಕೆ ''ರಾಗದ್ವೇಷಾದ್ಯನೇಕಾನರ್ಥ-ಸಂಕಟಗಳಲ್ಲಿ ಸ್ಥಿತನಾದ ಜೀವ'' ಎಂದು ಅರ್ಥವನ್ನು ಮಾಡುತ್ತಾರೆ ಅದ್ವೈತಿಗಳು. ಪ್ರತ್ಯಕ್ಷಸಿದ್ಧನಾದ ಜೀವನಿಗೆ ದುರ್ದರ್ಶತ್ವವು ಉಪಪನ್ನವಾಗುವದಿಲ್ಲ. ''ಅದೃಶ್ಯತ್ವಾದಿ-ಗುಣಕೋ ಧರ್ಮೋಕ್ತೇಃ'' ಎಂಬ ಸೂತ್ರವು ಅದೃಶ್ಯತ್ವವನ್ನು ಭಗವಂತನಿಗೆ ಹೇಳಿದೆ. ಗುಹಾನಿಹಿತತ್ವವೂ ಭಗವಂತನಲ್ಲಿಯೇ ಇದೆ. ಮತ್ತು ಜೀವನ ಜ್ಞಾನದಿಂದ ಶೋಕಮೋಹ-ಪರಿತ್ಯಾಗರೂಪವಾದ ಮುಕ್ತಿಯು ಸರ್ವಥಾ ಅಸಾಧ್ಯವಾಗಿದೆ.

ಆದ್ದರಿಂದ ಪ್ರಕೃತೋಪಯುಕ್ತವಾದ ಅರ್ಥವನ್ನು ಶ್ರೀಮದಾಚಾರ್ಯರು ತಿಳಿಸುತ್ತಾರೆ.

''ಗಹ್ವರ'' ಎಂದರೆ ಮುಕ್ತ ಎಂದು ಅರ್ಥ. ಸಂಸಾರಿಗಳಿಂದ ಅಗಮ್ಯರಾದ ಕಾರಣ ಮುಕ್ತರು ''ಗಹ್ವರ'' ಎನಿಸುತ್ತಾರೆ. (ಶಾಸ್ತ್ರಗಳಿಂದ ಹೊರತು ಬೇರೆ ರೀತಿಯಿಂದ ಮುಕ್ತರನ್ನು ತಿಳಿಯಲು ಸಾಧ್ಯವಿಲ್ಲ.) ''ಗಹ್ವರೇಷ್ಠ'' ಎಂದರೆ ಅವರಿಗೆ ನಿಯಾಮಕನಾಗಿ ಅಂತಸ್ಥನಾಗಿ ಇರುವವನು ಎಂದು ಅರ್ಥ. ಮುಕ್ತಜೀವನಿಯಾಮಕನಾರು ? ಎಂಬ ನಚಿಕೇತನ ಪ್ರಶ್ನೆಗೆ ಈ ಅರ್ಥ ಅನುಕೂಲವಾಗುತ್ತದೆ.

ಏತತ್ ಶ್ರುತ್ವಾ ಸಂಪರಿಗೃಹ್ಯ ಮರ್ತ್ಯಃ
ಪ್ರವೃಹ್ಯ ಧರ್ಮ್ಯಮಣುಮೇನಮಾಪ್ಯ ।
ಸ ಮೋದತೇ ಮೋದನೀಯಂ ಹಿ ಲಬ್ಧ್ವಾ
ವಿವೃತಂ ಸದ್ಮ ನಚಿಕೇತಸಂ ಮನ್ಯೇ ॥೧.೨.೧೩॥

ಜ್ಞಾನವಾಗುವದು ಹೇಗೆ ಎಂಬ ಸಮಸ್ಯೆಯನ್ನು ಈ ಮಂತ್ರ ಪರಿಹರಿಸುತ್ತದೆ. ಅಥವಾ ಹರ್ಷಶೋಕಗಳನ್ನು ಜ್ಞಾನಿಯಾದವನು ಪರಿತ್ಯಜಿಸುತ್ತಾನೆ ಎಂದರೆ ಪ್ರಾಕೃತವಾದ ಹರ್ಷಶೋಕಗಳನ್ನು ಪರಿತ್ಯಜಿಸುವಂತೆ ಅಪ್ರಾಕೃತವಾದ ಹರ್ಷವನ್ನು ಕೂಡಾ ಪರಿತ್ಯಜಿಸುತ್ತಾನೆಯೇ ಎಂಬ ಪ್ರಶ್ನೆಗೆ ಈ ಮಂತ್ರ ಉತ್ತರ ನೀಡುತ್ತದೆ.

ಮುಕ್ತನಿಯಾಮಕನಾದ ಭಗವಂತನ ಜ್ಞಾನ ಮೋಕ್ಷಸಾಧನವಾಗಿದೆ. ಹಾಗೆಯೆ ಜೀವನಿಂದ ಭಗವಂತ ಭಿನ್ನನಾಗಿರುವನೆಂಬ ಜ್ಞಾನವೂ ಮೋಕ್ಷದಾಯಕವಾಗಿದೆ. ಈ ವಿಷಯವನ್ನು ಕೂಡಾ ಈ ಮಂತ್ರವು ತಿಳಿಸುತ್ತದೆ.

ಮರಣಶೀಲನಾಗಿರುವ ಅಧಿಕಾರಿಯು ಶ್ರವಣಾದಿವಿಷಯದಲ್ಲಿ ಪ್ರಮಾದವನ್ನು ಹೊಂದಬಾರದು. ಸಾಧಕನಾದ ಜೀವನು ಮುಕ್ತನಿಯಾಮಕವಾದ ಭಗವತ್ಸ್ವರೂಪವನ್ನು ಶಿಷ್ಟರಾದ ಆಚಾರ್ಯರಿಂದ ಸರಿಯಾಗಿ ತಿಳಿದುಕೊಳ್ಳಬೇಕು. ಜೀವನಿಂದ ಭಿನ್ನನಾಗಿದ್ದಾನೆ ಎಂಬುದಾಗಿ ನಿರ್ಧರಿಸಿಕೊಳ್ಳಬೇಕು. ನಿತ್ಯವೂ ನಿದಿಧ್ಯಾಸನವನ್ನು ಮಾಡುತ್ತಾ ಭಗವದಪರೋಕ್ಷವನ್ನು ಪಡೆದು ಮುಕ್ತನಾಗಲು ಬಯಸಬೇಕು. ''ಸಕಲವನ್ನೂ ಧರಿಸುತ್ತಾನೆ'' ಎಂಬ ಕಾರಣದಿಂದ ಧರ್ಮನಾಮಕನಾದ, ಪರಮಸೂಕ್ಷ್ಮನಾದ ಭಗವಂತನನ್ನು ಸಾಧಕನಾದವನು ಪಡೆದು ನಿರತಿಶಯವಾದ ಮೋದವನ್ನು ಅನುಭವಿಸುತ್ತಾನೆ. ಭಗವಂತನ ಜ್ಞಾನದಿಂದ ವೈಷಯಿಕಸುಖದ ಪ್ರಹಾಣ ಆಗುತ್ತದೆಯೇ ಹೊರತು ಸ್ವರೂಪಸುಖದ ಪ್ರಹಾಣವಲ್ಲವೆಂದು ತಿಳಿದುಕೊಳ್ಳಬೇಕು. ಇಂತಹ ಪರಮಾತ್ಮನ ಸ್ವರೂಪವನ್ನು ತಿಳಿಯಲು ನೀನು ಅಪೇಕ್ಷೆ ಮಾಡಿದ್ದಿ. ನಿನಗೆ ಮುಕ್ತಿಯಾಗುವದು ನಿಶ್ಚಿತ. ಉರುಗಾಯನಲ್ಲಿ ಅಧಿಕ-ಭಕ್ತನಾದ ಹೇ ನಚಿಕೇತನೇ ! ನಿನಗೆ ಮುಕ್ತಿದ್ವಾರವು ತೆರೆದು ಇರುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ||೧.೨.೧೩||

**ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ ।**
**ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ ತತ್ ಪಶ್ಯಸಿ ತದ್ ವದ || ೧೪ ||**

ಪ್ರಶಂಸೆ ಸಾಕು. ತತ್ತ್ವವನ್ನು ನಾನು ಕೇಳಲು ಬಯಸಿದ್ದೇನೆಂದು ಪ್ರಾರ್ಥಿಸಿ ''ಪ್ರವೃಹ್ಯ'' ಎಂಬ ಶಬ್ದದಿಂದ ಯಮನು ಉಪದೇಶಮಾಡಿದ ಜೀವೇಶ್ವರರ ಭೇದವನ್ನು ವಿಶೇಷವಾಗಿ ಇಲ್ಲಿ ಅನುವಾದ ಮಾಡುತ್ತಿದ್ದಾನೆ ನಚಿಕೇತ.

ಮುಕ್ತನಿಯಾಮಕನಾದ ಭಗವಂತ, ಕೃತವಾದ ಅರ್ಥಾತ್ ಉತ್ಪನ್ನವಾದ ಮಹದಹಂಕಾರಾದಿ-ಪ್ರಪಂಚದಿಂದ ವಿಲಕ್ಷಣನಾಗಿದ್ದಾನೆ. ಅಕೃತವಾದ ಅರ್ಥಾತ್ ಅನುತ್ಪನ್ನವಾದ ಪ್ರಕೃತಿ-ಜೀವ-ಕಾಲ-ಅವ್ಯಾಕೃತಾಕಾಶ ಮೊದಲಾದ ಪ್ರಪಂಚದಿಂದಲೂ ವಿಲಕ್ಷಣನಾಗಿದ್ದಾನೆ. ಇದು ಈ ಕಲ್ಪದಲ್ಲಿ ಮಾತ್ರವಲ್ಲ. ಭೂತ-ಭವಿಷ್ಯತ್-ವರ್ತಮಾನಕಾಲದಲ್ಲಿಯ ಸಕಲಪ್ರಪಂಚದಿಂದಲೂ ಭಗವಂತ ಅತ್ಯಂತವಿಲಕ್ಷಣನಾಗಿದ್ದಾನೆ. ಕೇವಲ ಅಚೇತನವಾದ ಪ್ರಪಂಚದಿಂದ ಭಗವಂತ ವಿಲಕ್ಷಣನಾಗಿದ್ದಾನೆಂದು ಅಲ್ಲ. ಕಿಂತು ಧರ್ಮಾತ್ಮರಾದ ಜೀವರಾಶಿಗಳಿಂದ ಭಿನ್ನನಾಗಿದ್ದಾನೆ. ಅಧರ್ಮಾತ್ಮರಾದವರಿಂದಲೂ ಭಗವಂತ ಭಿನ್ನನಾಗಿದ್ದಾನೆ. ಭಗವಂತ ಧರ್ಮಬಹಿರ್ಭೂತ-ನಾಗಿದ್ದಾನೆ. ಅಧರ್ಮಬಹಿರ್ಭೂತನಾಗಿದ್ದಾನೆ. ಅರ್ಥಾತ್ ಧರ್ಮಾಧರ್ಮಗಳ ಫಲ ಭಗವಂತನಿಗೆ ಇಲ್ಲ. ಜೀವರು ಧರ್ಮಾಧರ್ಮಬಹಿರ್ಭೂತರಲ್ಲ. ಅವರಿಗೆ ಧರ್ಮಾಧರ್ಮಗಳ ಫಲರೂಪವಾಗಿ ಸ್ವರ್ಗ-ನರಕ-ಮುಕ್ತಿಗಳು ಇವೆ. ಭಗವಂತ ಧರ್ಮಾಧರ್ಮಬಹಿರ್ಭೂತ ಎಂಬ ಯುಕ್ತಿಯಿಂದ ಜೀವನಿಂದ ವಿಲಕ್ಷಣನಾಗಿದ್ದಾನೆ ಎಂಬ ತತ್ತ್ವವನ್ನು ಅತಿಸುಲಭವಾಗಿ ತಿಳಿಯಬಹುದು. ಸಾಧಿಸಲೂಬಹುದು. ಇಂತಹ ಮುಕ್ತನಿಯಾಮಕನಾದ ಭಗವಂತನನ್ನು

ನೀವು ತಿಳಿದಂತೆ ನನಗೆ ಉಪದೇಶಿಸಬೇಕು. ಎಂದು ನಚಿಕೇತ ಯಮದೇವರಿಗೆ ಪ್ರಾರ್ಥಿಸುತ್ತಿದ್ದಾನೆ. ॥೧.೨.೧೪॥

**ಸರ್ವೇ ವೇದಾ ಯತ್ ಪದಮಾಮನಂತಿ**
**ತಪಾಂಸಿ ಸರ್ವಾಣಿ ಚ ಯದ್ ವದಂತಿ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ ತೇ ಪದಂ ಸಂಗ್ರಹೇಣ ಬ್ರವೀಮಿ ಓಮಿತ್ಯೇತತ್ ॥ ೧೫ ॥**

ವೇದಗಳೆಲ್ಲ ಯಾವ ಭಗವಂತನನ್ನು ಮುಖ್ಯವಾಗಿ ಪ್ರತಿಪಾದಿಸಲು ತೊಡಗಿವೆಯೋ, "ತಪಾಂಸಿ" ಎಂದರೆ ಯುಕ್ತಿಗಳು ಎಂದು ಅರ್ಥ. ಯಾವ ಯುಕ್ತಿಗಳೆಲ್ಲ ಭಗವದ್ವಿಷಯಕವಾಗಿವೆಯೋ, ಯಾರ ಉದ್ದೇಶದಿಂದ, ಯಾವ ಭಗವಂತನ ಪ್ರೀತ್ಯರ್ಥ ತಪಸ್ಸು ಮೊದಲಾದ ಕರ್ಮಗಳನ್ನು ಮಾಡಬೇಕೆಂದು ವೇದಗಳೆಲ್ಲ ಹೊಗಳುತ್ತವೆಯೋ, ಯಾವ ಭಗವಂತನನ್ನು ಬಯಸಿ ಸಾಧಕರು ಬ್ರಹ್ಮಚರ್ಯವನ್ನು ಅರ್ಥಾತ್ ವೇದೋಕ್ತವಾದ ತತ್ತ್ವಗಳ ಶ್ರವಣ-ಮನನಾದಿಗಳನ್ನು ಮಾಡುವರೋ, ಮತ್ತು ಗುರುಕುಲವಾಸವನ್ನು ಮಾಡುತ್ತಾ ಗುಹ್ಯೇಂದ್ರಿಯವನ್ನು ನಿಯಮನ ಮಾಡುತ್ತಾರೋ, ಅಂತಹ ಪರಬ್ರಹ್ಮನ ಸ್ವರೂಪವನ್ನು ಪರಿಪೂರ್ಣವಾಗಿ ತಿಳಿಸಲು ಅಸಾಧ್ಯವಾದುದರಿಂದ ಸಂಗ್ರಹವಾಗಿ ನಾನು ನಿನಗೆ ಉಪದೇಶಮಾಡುತ್ತೇನೆ. ಆ ಬ್ರಹ್ಮ ಅನಂತಗುಣಪರಿಪೂರ್ಣನಾದ ಕಾರಣ ಓಂಕಾರವಾಚ್ಯನಾಗಿದ್ದಾನೆ. ಹೀಗೆಯೆ ಪರಬ್ರಹ್ಮನ ಉಪಾಸನೆ ಮಾಡಬೇಕು. ॥೧.೨.೧೫॥

**ವಾದಿರಾಜೀಯವಿಶೇಷ** - ವೇದದಲ್ಲಿ ಅಗ್ನಿ-ವೈಶ್ವಾನರ-ಹಿರಣ್ಯಗರ್ಭ-ರುದ್ರ-ಇಂದ್ರ-ವಿಶ್ವಕರ್ಮ ಮೊದಲಾದ ದೇವತೆಗಳ ನಾಮಗಳು ಬಂದಿವೆ. ಹಾಗಾದರೆ ಅವರು ಸರ್ವೋತ್ತಮರು ಎಂದು ಸಂಶಯಪಡಬಾರದು. ಸಕಲವೇದಗಳೂ ಭಗವಂತನ ಸ್ವರೂಪವನ್ನು ಪ್ರತಿಪಾದಿಸುತ್ತವೆ. ಅಂತೆಯೆ ಅಗ್ನ್ಯಾದಿ ಆ ಎಲ್ಲ ನಾಮಗಳಿಂದ ಮುಖ್ಯವಾಗಿ ವಾಚ್ಯನಾದವನು ಭಗವಂತನೇ ಆಗಿದ್ದಾನೆ. ಆದ್ದರಿಂದ ಅವನೇ ಸರ್ವೋತ್ತಮ. ಸೃಷ್ಟಿಗಿಂತಲೂ ಪೂರ್ವದಲ್ಲಿಯೇ ಇರುವ ವೇದಗಳು ಸೃಷ್ಟ್ಯುತ್ತರಕಾಲದಲ್ಲಿರುವ ಅಗ್ನ್ಯಾದಿದೇವತೆಗಳನ್ನು ಪ್ರತಿಪಾದಿಸಲು ಸಾಧ್ಯವಿಲ್ಲ, ಹಾಗಾದರೆ ಅಗ್ನ್ಯಾದಿದೇವತೆಗಳು, ಯಜ್ಞಮೊದಲಾದ ಕರ್ಮಗಳು ಅಪ್ರಾಮಾಣಿಕವೆಂದು ಶಂಕೆ ಬರುತ್ತದೆ. ಇದನ್ನು "ಆ ಮನಂತಿ" ಎಂಬ ಮಾತು ಪರಿಹರಿಸುತ್ತದೆ. ವೇದಗಳು ಸದಾ ಭಗವಂತನನ್ನೇ ಪ್ರತಿಪಾದಿಸುತ್ತವೆ. ಸೃಷ್ಟ್ಯುತ್ತರಕಾಲದಲ್ಲಿ ಭಗವಂತ ಅಗ್ನ್ಯಾದಿನಾಮಗಳನ್ನು ದೇವತೆಗಳಿಗೆ ನೀಡಿದ್ದಾನೆ. ಆದ್ದರಿಂದ ಸೃಷ್ಟ್ಯುತ್ತರಕಾಲದಲ್ಲಿ ವೇದಗಳು ಅಮುಖ್ಯವಾಗಿ ಆಯಾ ದೇವತೆಗಳನ್ನು ಪ್ರತಿಪಾದಿಸುತ್ತವೆ ಎಂದು ಹೇಳಿದರೆ ಸರ್ವವೂ ಸಮಂಜಸವಾಗುತ್ತದೆ.

ಏತದ್ ಹ್ಯೇವಾಕ್ಷರಂ ಬ್ರಹ್ಮ ಏತದ್ ಹ್ಯೇವಾಕ್ಷರಂ ಪರಮ್ ।
ಏತದ್ ಹ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥೧.೨.೧೬॥

''ಓಂ'' ಎಂಬ ಅಕ್ಷರವು ಅಪರಬ್ರಹ್ಮ ಇದೇ ಅಕ್ಷರ ಪರಬ್ರಹ್ಮ ಅರ್ಥಾತ್ ಪರಾಪರಬ್ರಹ್ಮಪ್ರತೀಕವಾಗಿದೆ. ಹೀಗೆಂದು ಈ ''ಓಂ'' ಎಂಬ ಅಕ್ಷರದ ಉಪಾಸನೆ ಮಾಡಿದವರಿಗೆ ಅಭೀಷ್ಟವರಗಳೆಲ್ಲ ಸಿದ್ಧಿಸುತ್ತವೆ. ಹೀಗೆಂದು ಅದ್ವೈತಿಗಳು ವ್ಯಾಖ್ಯಾನ-ಮಾಡುತ್ತಾರೆ. ಈ ಉಪಾಸನೆ ಸರಿಯಾದುದಲ್ಲವೆಂದು ಮಹಾವಾರಾಹಪುರಾಣ ತಿಳಿಸುತ್ತದೆ.

ಅವಿದ್ಯಮಾನೋಪಾಸನೆ ಅನರ್ಥಪ್ರದವಾಗಿದೆ. ಪ್ರಮಾಣವಿರುದ್ಧವೂ ಆಗಿರುವುದರಿಂದ ಈರೀತಿಯಾಗಿ ವ್ಯಾಖ್ಯಾನಮಾಡುವದು ಸರಿಯಲ್ಲ ಎಂಬ ಭಾವನೆಯಿಂದ ಎರಡು ಮಂತ್ರಗಳನ್ನು ಪ್ರಮಾಣಪೂರ್ವಕವಾಗಿ ಆಚಾರ್ಯರು ಸಮರ್ಥಿಸುತ್ತಾರೆ. ಈ ಮಂತ್ರದ ಅರ್ಥವನ್ನು ಹೀಗೆ ತಿಳಿಯಬೇಕು.

ಪ್ರಣವಪ್ರತಿಪಾದ್ಯನಾದ ಭಗವಂತನ ಮಹಿಮೆಯ ಜ್ಞಾನದಿಂದ ಜೀವರಿಗಾಗುವ ಲಾಭವನ್ನು ಈ ಮಂತ್ರ ಪ್ರತಿಪಾದಿಸುತ್ತದೆ.

ಓಂಕಾರವಾಚ್ಯನಾಗಿರುವ ಪರಬ್ರಹ್ಮ ದೇಹಾದಿನಾಶಶೂನ್ಯನಾಗಿರುವುದರಿಂದ ಅಕ್ಷರನಾಗಿದ್ದಾನೆ. ಬ್ರಹ್ಮ-ಗುಣಗಳಿಂದ ಬೃಂಹಿತ ಯುಕ್ತನಾಗಿದ್ದಾನೆ. ಸರ್ವೋತ್ತಮನಾಗಿದ್ದಾನೆ. ಭಗವಂತನ ಈ ಮಹಿಮೆಯನ್ನು ಸರಿಯಾಗಿ ತಿಳಿದ ಆಧಿಕಾರಿಯು ತಾನು ಬಯಸಿದ್ದನ್ನೆಲ್ಲ ಪಡೆಯುತ್ತಾನೆ. ॥೧.೨.೧೬॥

ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಮ್ ।
ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥೧.೨.೧೭॥

ಓಂನಾಮಕನಾದ ವಿಷ್ಣುವೆ ಎಲ್ಲರಿಗೂ ಮುಖ್ಯವಾಗಿ ಆಶ್ರಯನಾಗಿದ್ದಾನೆ. ಈ ಲೋಕದಲ್ಲಿಯ ರಾಜಾದಿಗಳಂತೆ ಮಾತ್ರ ಭಗವಂತ ಜೀವರಿಗೆ ಆಶ್ರಯನೆಂದು ತಿಳಿಯಬಾರದು. ರಾಜಾದಿಗಳಿಗಿಂತ ವಿಲಕ್ಷಣನಾಗಿದ್ದಾನೆ ಪರಮಾತ್ಮ ಎಲ್ಲದಕ್ಕೂ ಜೀವರಾಶಿಗಳ ಪ್ರತಿಯೊಂದು ಅವಸ್ಥೆಯಲ್ಲಿಯೂ ಪರಮಾತ್ಮನ ಆವಶ್ಯಕತೆ ಇದೆ. ಹೀಗೆಂದು ತಿಳಿದವರು ಮುಕ್ತಿಯನ್ನು ಪಡೆಯುತ್ತಾರೆ. ಮುಕ್ತಿಯಲ್ಲಿ ತನಗಿಂತಲೂ ನೀಚರಾದವರಿಂದ ಪೂಜ್ಯರಾಗುತ್ತಾರೆ. ॥೧.೨.೧೭॥

ಅಜ್ಞಾನಿಗಳಾದ, ಮಧ್ಯಮರಾದ ಸಾಧಕರು ಬ್ರಹ್ಮನ ಉಪಾಸನೆಯನ್ನು ಮಾಡಬೇಕಾದರೆ ಆಲಂಬನ ಅರ್ಥಾತ್ ಪ್ರತೀಕ ಒಂದು ಬೇಕು. ಹೀಗೆಂದು ಆಕಾಶ, ಆದಿತ್ಯ, ಮನಸ್ಸು ನಾಮ ಮೊದಲಾದ ಆಲಂಬನಗಳನ್ನು (ಪ್ರತೀಕ) ಶಾಸ್ತ್ರದಲ್ಲಿ ಹೇಳಿದ್ದಾರೆ. ಆ ಎಲ್ಲ ಪ್ರತೀಕಗಳಲ್ಲಿ ಶ್ರೇಷ್ಠವಾದ ಪ್ರತಿಮೆ ಓಂಕಾರವಾಗಿದೆ. ಹೀಗಾಗಿ ಓಂಕಾರದಲ್ಲಿ ಪರಾಪರಬ್ರಹ್ಮರ

ಉಪಾಸನೆಯನ್ನು ಮಾಡಿದವರು ಬ್ರಹ್ಮನಾಗಿ ಬ್ರಹ್ಮನಂತೆ ಉಪಾಸ್ಯರಾಗುತ್ತಾರೆ. ಇದು ಅದ್ವೈತಿಗಳ ವ್ಯಾಖ್ಯಾನ.

ಇದು ಮಹಾವಾರಾಹಪುರಾಣ ತಿಳಿಸುವ ಅರ್ಥಕ್ಕೆ ವಿರುದ್ಧವಾಗಿದೆ. ಈ ಪುರಾಣಕ್ಕೆ ಅನುಗುಣವಾದ ಸೊಗಸಾದ ನಿರೂಪಣೆಯನ್ನು ಶ್ರೀಮದಾಚಾರ್ಯರು ತಿಳಿಸಿದ್ದಾರೆ. ಆ ಅರ್ಥವನ್ನು ತಿಳಿದಾಗಿದೆ.

ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್
ನಾಯಂ ಕುತಶ್ಚಿತ್ ನ ಬಭೂವ ಕಶ್ಚಿತ್ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇಽಪಿ ದೇಹೇ ॥೧.೨.೧೮॥

ಜೀವನಿಗೆ ಉತ್ಪತ್ತಿವಿನಾಶಗಳಿವೆ. ಆದ್ದರಿಂದ ಅವನಿಗೆ ನಿತ್ಯತ್ವವನ್ನು ಹೇಗೆ ಹೇಳುವುದು ಎಂಬ ಶಂಕೆಗೆ ಈ ಮಂತ್ರ ಪರಿಹಾರವನ್ನು ತಿಳಿಸುತ್ತದೆ. ಈ ವಾಕ್ಯದ ಅಭಿಪ್ರಾಯವನ್ನು ಮಹಾವಾರಾಹವಚನದಿಂದ ಶ್ರೀಮದಾಚಾರ್ಯರು ಸ್ಪಷ್ಟಪಡಿಸುತ್ತಾರೆ.

ದೇಹೋತ್ಪತ್ತಿವಿನಾಶಗಳು ಜೀವನಿಗೆ ಅನಾದಿಕಾಲದಿಂದ ಇವೆ. ಅನಾದಿಯಾದ ಈ ದೇಹೋತ್ಪತ್ತಿವಿನಾಶಗಳನ್ನು ಪರಿಹರಿಸಿಕೊಳ್ಳಲು ಭಗವಂತನ ಅಪರೋಕ್ಷಜ್ಞಾನ ಮಾತ್ರ ಉಪಾಯವಾಗಿದೆ. ಯಾಕೆಂದರೆ ವಿಷ್ಣುವಿನ ಸ್ವರೂಪಕ್ಕೂ ಜನನಮರಣವಿರುವದಿಲ್ಲ. ಮತ್ತು ಅವನ ದೇಹಕ್ಕೂ ಜನನಮರಣಗಳಿರುವುದಿಲ್ಲ. ವಿಷ್ಣುವಿನ ದೇಹವು ವಿಷ್ಣುವಿನ ಸ್ವರೂಪವಾಗಿದೆ. ಭಗವಂತನಿಂದ ಭಿನ್ನವಾದುದಲ್ಲ. ಹೀಗಾಗಿ ಪರಮಾತ್ಮ ಅನಾದಿನಿತ್ಯನಾಗಿದ್ದಾನೆ. ಅಂತಹ ಭಗವಂತನನ್ನು ಅಪರೋಕ್ಷೀಕರಿಸಿಕೊಂಡಿರುವ ವಿದ್ವಾಂಸರಿಗೆ ಭಗವಂತನ ಪ್ರಸಾದದಿಂದ ಜನನಮರಣಗಳು ಪರಿಹೃತವಾಗುತ್ತವೆ. ಭಗವಂತನ ಅನುಗ್ರಹವನ್ನು ಪಡೆಯಲಾರದವರು ಈ ಜನನಮರಣಗಳ ಸಂಕೊಲೆಯನ್ನು ತಪ್ಪಿಸಿಕೊಳ್ಳಲಾಗುವದಿಲ್ಲ.

ಜ್ಞಾನಿಯಾಗಿರಲಿ ಅಜ್ಞಾನಿಯಾಗಿರಲಿ ಜೀವರಿಗೆ ಸ್ವರೂಪತಃ ಉತ್ಪತ್ತಿವಿನಾಶಗಳು ಸರ್ವಥಾ ಇರುವದಿಲ್ಲ. ಸ್ವರೂಪತಃ ಜೀವ ಅನಾದಿಯಾಗಿದ್ದಾನೆ. ಜೀವನು ಶರೀರಗಳನ್ನು ಪಡೆಯುತ್ತಾನೆ ಎಂಬ ಕಾರಣಕ್ಕಾಗಿ ''ಪುರಾಣ'' ಎಂಬ ಶಬ್ದದಿಂದ ಜನ್ಮಉಳ್ಳವನು ಎಂದು ಕರೆಯಲ್ಪಟ್ಟರೂ ಸ್ವರೂಪತಃ ಜನನಮರಣಗಳು ಇಲ್ಲದಿದ್ದುದರಿಂದ ''ಅಜ'' ಎಂದು ಜೀವನು ಕರೆಯಲ್ಪಡುತ್ತಾನೆ.

ಹಾಗೆಯೆ ಜೀವನಿಗೆ ಸ್ವರೂಪತಃ ಮರಣವೂ ಇಲ್ಲದ ಕಾರಣ ನಿತ್ಯನೆನಿಸಿಕೊಳ್ಳುತ್ತಾನೆ. ಪರಿಣಾಮರೂಪವಾದ ವಿಕಾರ ಜೀವನಿಗಿಲ್ಲವಾದ್ದರಿಂದ ಜೀವ ಶಾಶ್ವತನಾಗಿದ್ದಾನೆ. ದೇಹದ ನಾಶವಾಗುತ್ತಿದ್ದರೂ ಅದರ ಸ್ವಾಮಿಯಾದ ಜೀವನಿಗೆ ಸರ್ವಥಾ ಮರಣವಿರುವದಿಲ್ಲ.

ನಿತ್ಯಾನಿತ್ಯವಾದ ಪದಾರ್ಥಗಳ ಸತ್ತಾದಿಗಳು ಪರಮಾತ್ಮನಿಂದಲೇ ನಿಯತವಾಗಿವೆ. ಆದರೆ ಭಗವಂತನ ಸತ್ತಾ ಅನ್ಯಾಧೀನವಾದದ್ದಲ್ಲ. ಸ್ವಾಧೀನವೇ ಆಗಿದೆ. ಅಂತಹ ಪರಮಾತ್ಮನಿಗೆ ಶರೀರತಃ ಜನನಮರಣಗಳೂ ಇರುವುದಿಲ್ಲ.

''ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ನಾಯಂ ಕುತಶ್ಚಿತ್ ನ ಬಭೂವ ಕಶ್ಚಿತ್'' ಎಂಬ ವಚನ ವಿದ್ವಾಂಸನಾದವನು ಭಗವಂತನನ್ನು ಅಪರೋಕ್ಷೀಕರಿಸಿಕೊಂಡು ಮುಕ್ತನಾಗುತ್ತಾನೆ ಎಂಬ ವಿಷಯವನ್ನು ತಿಳಿಸುತ್ತದೆ. ಬಿಂಬಭೂತನಾದ ಪರಮಾತ್ಮನಿಗೆ ಯಾವುದೇ ಕಾರಣದಿಂದ ಜನನಮರಣಗಳಿರುವುದಿಲ್ಲ. ಆದ್ದರಿಂದ ಪ್ರಧಾನವಾಗಿ ಭಗವಂತನ ಪ್ರತಿಬಿಂಬರಾಗಿರುವ ಮುಕ್ತರಾದ ಜೀವರಾಶಿಗಳ ಶರೀರಕ್ಕೂ ಜನನಮರಣಗಳಿರುವುದಿಲ್ಲ. ''ಜೀವೋ ನಿತ್ಯೋ ಧಾತುರಸ್ಯ ತ್ವನಿತ್ಯಃ'' ಎಂಬ ಪ್ರಮಾಣಕ್ಕೆ ಅನುಗುಣವಾಗಿ ಸಂಸಾರದಶಾದಲ್ಲಿಯೂ ಜೀವನಿಗೆ ಸ್ವರೂಪತಃ ಜನನಮರಣಗಳಿರುವದಿಲ್ಲ. ಜೀವನ ದೇಹಕ್ಕೆ ಮಾತ್ರ ಜನನ ಮರಣಗಳು. ಹೀಗಿರುವಾಗ ಮಕ್ತನಾದಮೇಲೆ ಸರ್ವಥಾ ಜನನಮರಣಗಳು ಇರುವದಿಲ್ಲವೆಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ.

ಜೀವರಿಗೆ ಮುಕ್ತಿಯಾದಮೇಲೆ ಕರ್ಮದ ಬಂಧನವಿಲ್ಲ. ಆದ್ದರಿಂದ ಕರ್ಮನಿರ್ಮಿತವಾದ ದೇಹದ ಸಂಬಂಧವಿರುವದಿಲ್ಲ. ಈ ಕಾರಣ ಜನ್ಮವಿರುವದಿಲ್ಲ. ಕರ್ಮನಿರ್ಮಿತವಾದ ದೇಹದ ವಿಯೋಗವಿಲ್ಲದ ಕಾರಣ ಮರಣವೂ ಇರುವದಿಲ್ಲ. ಜ್ಞಾನಿಯಾದವನು ಬ್ರಹ್ಮಲೋಕವನ್ನು ಪಡೆದಮೇಲೆ ಜನನಮರಣಗಳನ್ನು ಪಡೆಯುವದಿಲ್ಲ. ಯಾಕೆಂದರೆ ಮುಕ್ತರಾದ ಜೀವರು ಭಗವಂತನಿಗೆ ವಿಶೇಷವಾಗಿ ಪ್ರತಿಬಿಂಬರಾಗಿರುತ್ತಾರೆ. ಬಿಂಬನಾದ ಭಗವಂತನಿಗೆ ಜನನಮರಣಗಳಿರುವದಿಲ್ಲವಾದ್ದರಿಂದ ವಿಶೇಷವಾಗಿ ಪ್ರತಿಬಿಂಬರಾಗಿರುವ ಮುಕ್ತರಾದ ಜೀವರಾಶಿಗಳಿಗೆ ಜನನಮರಣಗಳಿರುವದಿಲ್ಲ.

ಜ್ಞಾನಿಯಾದವನಿಗೆ ಜನನಮರಣರಾಹಿತ್ಯವೆಂದರೆ ದೇಹದ ಉತ್ಪತ್ತಿವಿನಾಶಗಳಿರುವುದಿಲ್ಲವೆಂದು ಅರ್ಥವೇ ಹೊರತು ಸ್ವರೂಪತಃ ಜನನಮರಣರಾಹಿತ್ಯವೆಂದು ಅಭಿಪ್ರಾಯವಲ್ಲ. ಸ್ವರೂಪತಃ ಜನನಮರಣರಾಹಿತ್ಯವಿದು ಸರ್ವಜೀವಸಾಧಾರಣವಾಗಿದೆ. ಭಗವಂತನನ್ನು ತಿಳಿದವರಿಗೆ ಮಾತ್ರ ಈ ತರಹದ ಪ್ರಯೋಜನ ಹೇಳುವುದು ಸಂಗತವಾಗುವದಿಲ್ಲ. ॥೧.೨.೧೮॥

ಹಂತಾ ಚೇತ್ ಮನ್ಯತೇ ಹಂತುಂ ಹತಃ ಚೇತ್ ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥೧.೨.೧೯॥

ಯಜ್ಞದತ್ತನನ್ನು ನಾನು ಸಂಹರಿಸುತ್ತೇನೆ. ದೇವದತ್ತನಿಂದ ನಾನು ಹತನಾಗಿದ್ದೇನೆ ಎಂಬುದಾಗಿ ಜೀವನಿಗೆ ಜನನಮರಣಗಳು ಲೋಕವ್ಯವಹಾರದಿಂದ ಪ್ರಸಿದ್ಧವಾಗಿವೆ.

ಆದ್ದರಿಂದ ಜೀವನ ಸ್ವರೂಪಕ್ಕೆ ಉತ್ಪತ್ತಿವಿನಾಶಗಳು ಇದ್ದಂತೆ ಅನಿಸುತ್ತದೆ. ಇದನ್ನು ನಿರಾಕರಿಸುವದು ಹೇಗೆ ? ಎಂಬ ಪ್ರಶ್ನೆಗೆ ಈ ಮಂತ್ರ ಉತ್ತರ ನೀಡುತ್ತದೆ.

''ನಾನು ಸಂಹಾರಮಾಡುತ್ತಿದ್ದೇನೆ'' ಎಂದು ಸಂಹಾರಮಾಡುವವನು ತಿಳಿಯುತ್ತಾನೆ. ಹತನಾದವನು ''ನಾನು ಹತನಾದೆ'' ಎಂದು ಭಾವಿಸುತ್ತಾನೆ. ಆ ತಿಳುವಳಿಕೆ ಭ್ರಾಂತಿಯೇ ಹೊರತು ಯಥಾರ್ಥವಲ್ಲ. ಈ ರೀತಿಯಾಗಿರುವ ಲೋಕದ ವ್ಯವಹಾರವೆಲ್ಲ ಯಥಾರ್ಥ-ವಾಗಿಲ್ಲವೆಂದೇ ಅರ್ಥ. ಜೀವನ ಸ್ವರೂಪ ವಿನಾಶಿಯಲ್ಲ. ಅದು ಜನ್ಯವೂ ಅಲ್ಲ. ಜೀವನಿಗೆ ಜನನ ಮರಣಗಳಿವೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಲೌಕಿಕವ್ಯವಹಾರವಿದು ದೇಹವಿಷಯಕವೇ ಹೊರತು ಜೀವವಿಷಯಕವಲ್ಲ.

**ಅಣೋರಣೀಯಾನ್ಮಹತೋ ಮಹೀಯಾನ್**
**ಆತ್ಮಾಸ್ಯ ಜಂತೋಃ ನಿಹಿತೋ ಗುಹಾಯಾಮ್ ।**
**ತಮಕ್ರತುಃ ಪಶ್ಯತಿ ವೀತಶೋಕೋ**
**ಧಾತುಃ ಪ್ರಸಾದಾತ್ ಮಹಿಮಾನಮಾತ್ಮನಃ ॥೧.೨.೨೦॥**

ಯಮನು ನಚಿಕೇತನಿಗೆ ಉಪದೇಶ ಮಾಡಿದ ಪ್ರಕಾರವನ್ನು ಉಪನಿಷತ್ತು ಇಲ್ಲಿಂದ ನಿರೂಪಣೆ ಮಾಡುತ್ತಿದೆ. ''ಏತದ್ಧ್ಯೇವಾಕ್ಷರಂ ಜ್ಞಾತ್ವಾ'' ಎಂಬಲ್ಲಿ ಕೇವಲ ಜ್ಞಾನವು ವಿವಕ್ಷಿತವಾಗಿಲ್ಲ. ಕಿಂತು ಅಪರೋಕ್ಷಜ್ಞಾನವೆ ವಿವಕ್ಷಿತವಾಗಿದೆ. ಈ ಅಪರೋಕ್ಷಕ್ಕೆ ಸಾಧಕ ಯಾವುದು ? ಅಪರೋಕ್ಷಜ್ಞಾನದ ಫಲವೇನು ? ಎಂಬುದನ್ನು ಇದೇ ಮಂತ್ರವು ತಿಳಿಸುತ್ತದೆ.

ಭಗವಂತ ಅಣುವಿಗಿಂತಲೂ ಅಣುವಾಗಿದ್ದಾನೆ. ಅರ್ಥಾತ್ ಅತ್ಯಂತಸೂಕ್ಷ್ಮನಾಗಿದ್ದಾನೆ. ಮಹತ್ತಾದ ಪದಾರ್ಥಗಳಿಗಿಂತಲೂ ಮಹತ್ ಆಗಿದ್ದಾನೆ. ಅರ್ಥಾತ್ ಅತ್ಯಂತ ಸ್ಥೂಲನಾಗಿದ್ದಾನೆ. ಆ ಭಗವಂತ ಅಣುವಾದದ್ದರಿಂದಲೇ ಅತ್ಯಂತಸೂಕ್ಷ್ಮನಾಗಿರುವ, ಸ್ವರೂಪಾಪೇಕ್ಷಯಾ ನಿತ್ಯನಾಗಿರುವ ಜೀವನ ಹೃದಯಾಕಾಶದಲ್ಲಿ ನಿಹಿತನಾಗಿದ್ದಾನೆ. ಮೋಕ್ಷಾಧಿಕಾರಿಯಾದವನು ಮೊದಲು ಭಗವಂತನ ಜ್ಞಾನವನ್ನು ದೃಢನಿರೂಢವಾಗುವಂತೆ ಮಾಡಿಕೊಳ್ಳಬೇಕು. ಜ್ಞಾನದಾರ್ಢ್ಯವೇ ಅಪರೋಕ್ಷಕ್ಕೆ ಸಹಕಾರಿಯಾಗುತ್ತದೆ. ಮತ್ತು ಸಕಲಜೀವರಾಶಿಗಳಿಗಿಂತಲೂ ಭಗವಂತ ಉತ್ತಮನಾಗಿದ್ದಾನೆ ಎಂದು ತಿಳಿದಿರಬೇಕು. ಇಂಥವನಿಗೆ ಸರ್ವಧಾರಕನಾದ ಭಗವಂತನ ಪ್ರಸಾದವಾಗುತ್ತದೆ. ಭಗವಂತನ ಪ್ರಸಾದವು ಸಂಸಾರದ ಸಂಕೊಲೆಯನ್ನು ಪರಿಹರಿಸುತ್ತದೆ.

ಇಲ್ಲದ ಶಶವಿಷಾಣದ ಪ್ರತ್ಯಕ್ಷ ಹೇಗೆ ಅಸಂಭಾವಿತವೋ ಹಾಗೆ ಇಲ್ಲದ ಆತ್ಮೈಕ್ಯವು ಯಾರಿಗೂ ಅಪರೋಕ್ಷವಾಗುವದಿಲ್ಲ. ಇದು ಸರ್ವಥಾ ಅಸಂಭಾವಿತವಾಗಿದೆ. ಐಕ್ಯಾಪರೋಕ್ಷಕ್ಕಾಗಿ ಸಾಕಷ್ಟು ಪ್ರಯತ್ನ ಮಾಡಿದರೂ ಅದರ ಪ್ರತ್ಯಕ್ಷವಾಗುವದಿಲ್ಲ. ಆದ್ದರಿಂದ

ಸರ್ವೋತ್ತಮತ್ವೇನ ಭಗವಂತನ ಅಪರೋಕ್ಷಜ್ಞಾನವನ್ನು ಮಾಡಿಕೊಳ್ಳುವ ಪ್ರಯತ್ನವನ್ನು ಮಾಡುತ್ತಿರಬೇಕು. ಭಗವಂತನ ಪ್ರಸಾದದಿಂದಲೇ ಜೀವರು ಶೋಕಶೂನ್ಯರಾಗುತ್ತಾರೆ.
॥೧.೨.೨೦॥

ಭಗವಂತ ನಿತ್ಯರಾದ ಜೀವರ ಹೃದಯಗುಹಾದಲ್ಲಿ ಇರುತ್ತಾನೆ ಎಂಬುದನ್ನು ಹೇಳುವದಕ್ಕಾಗಿ ಮಧ್ಯದಲ್ಲಿ ''ನ ಜಾಯತೇ'' ಎಂಬ ಮಂತ್ರದಿಂದ ಜೀವನ ಪ್ರಸಕ್ತಿಯನ್ನು ತಂದು ಜೀವನಿಗೆ ನಿತ್ಯತ್ವವನ್ನು ಉಪನಿಷತ್ತು ಹೇಳುತ್ತದೆ. ಆದ್ದರಿಂದ ಯಾವುದೇ ಅಸಂಗತಿಗೆ ಇಲ್ಲಿ ಅವಕಾಶವಿರುವದಿಲ್ಲ.

ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ ।
ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ ೨೧ ॥

''ಆಸೀನೋ ದೂರಂ ವ್ರಜತಿ'' ಇತ್ಯಾದಿಯಾದ ವಿರುದ್ಧಗುಣಾಶ್ರಯತ್ವರೂಪವಾದ, ಅತ್ಯದ್ಭುತವಾದ, ಲೋಕವಿಲಕ್ಷಣವಾದ ಧರ್ಮಗಳು ಪರಬ್ರಹ್ಮನಿಗೆ ಇವೆ ಎಂಬುದನ್ನು ಈ ಮಂತ್ರದಿಂದ ಯಮದೇವರು ತಿಳಿಸುತ್ತಿದ್ದಾರೆ.

ಭಗವಂತ ಒಂದು ಕಡೆ ಕುಳಿತುಕೊಂಡೇ ದೂರ ಹೋಗುತ್ತಾನೆ. ಮಲಗಿಕೊಂಡೇ ಎಲ್ಲ ಕಡೆ ಸಂಚರಿಸುತ್ತಾನೆ. ಭಗವಂತನಿಗಿರುವ ಈ ಲೋಕವಿಲಕ್ಷಣವಾದ ಧರ್ಮಗಳು ಮಾಯಾ-ಮಯವಲ್ಲ. ಕಿಂತು ಭಗವಂತನ ಐಶ್ವರ್ಯದಿಂದ ಈ ತರಹದ ಧರ್ಮಗಳು ಅವನಿಗಿರುವುದೆಂದು ತಿಳಿದುಕೊಳ್ಳಬೇಕು. ತನ್ನ ಭಕ್ತರಿಗೆ ಮದವನ್ನು ಅರ್ಥಾತ್ ಸಂತೋಷವನ್ನು ಕರುಣಿಸುತ್ತಾನೆ. ತನ್ನನ್ನು ದ್ವೇಷಮಾಡುವವರಿಗೆ ಸಂತೋಷವನ್ನು ಭಗವಂತ ನೀಡುವದಿಲ್ಲ. ಕಿಂತು ಅಮದ ಅರ್ಥಾತ್ ದುಃಖವನ್ನು ನೀಡುತ್ತಾನೆ. ಈ ಕಾರಣದಿಂದ ಭಗವಂತ ಮದಾಮದನಾಗಿದ್ದಾನೆ. ಭಗವಂತನ ಈ ರೀತಿಯಾದ ಐಶ್ವರ್ಯವನ್ನು , ಮಹಾಸಾಮರ್ಥ್ಯವನ್ನು ನನ್ನ ಹೊರತು ಪ್ರಾಕೃತರಾದ ಮತ್ತಾರೂ ತಿಳಿದುಕೊಳ್ಳಲು ಸಾಧ್ಯವಿಲ್ಲ. ನನಗೆ ನಿಯಾಮಕನಾದ ''ಕಃ'' ಬ್ರಹ್ಮದೇವರು ಮಾತ್ರ ಸಕಲವೇದೋಕ್ತ-ಪ್ರಕಾರೇಣ ತಿಳಿದುಕೊಂಡಿರುತ್ತಾರೆ. ಅವರ ಹೊರತು ಮತ್ತಾರೂ ತಿಳಿಯಲು ಸಾಧ್ಯವಿಲ್ಲ.
॥೧.೨.೨೧॥

ಭಗವಂತ ಆಸೀನನಾಗಿಯೇ ದೂರ ಹೋಗುತ್ತಾನೆ ಎಂಬ ಮಾತು ವಿರುದ್ಧವಾದ ವಿಷಯವನ್ನು ತಿಳಿಸುತ್ತದೆ. ಆದ್ದರಿಂದ ಇಲ್ಲಿ ಆಸೀನನಾಗಿರುವದು ಯಥಾರ್ಥವಾದರೆ ದೂರಗಮನವಿದು ಭ್ರಾಂತಿ ಎಂದು ಅನ್ಯಥಾ ಭಾವಿಸುವ ಪ್ರಸಂಗವಿರುತ್ತದೆ. ಆದರೆ ಹಾಗೆ ತಿಳಿಯುವ ಕಾರಣವಿಲ್ಲ. ಅಸಮರ್ಥರಾದ ಜೀವರ ವಿಷಯದಲ್ಲಿ ಈ ತರಹದ ನಿರ್ಧಾರಕ್ಕೆ ಬರಬಹುದು. ಇದರಿಂದ ಯಾರಿಗೂ ಅನರ್ಥವಿರುವದಿಲ್ಲ. ಆದರೆ ಅತಿಸಮರ್ಥನಾದ

ಅಘಟಿತಘಟನಾಪಟುವಾದ ಪರಮಾತ್ಮನ ವಿಷಯದಲ್ಲಿ ವಿರುದ್ಧವಾದ ಈ ಧರ್ಮಗಳು ಕಾಲ್ಪನಿಕವೆಂದು ನಿರಾಕರಿಸುವ ಹಾಗಿಲ್ಲ. ಈ ವಿಷಯವನ್ನು ಮಹಾವಾರಾಹದ ವಚನ ತಿಳಿಸುತ್ತದೆ. ಆದ್ದರಿಂದ ಸ್ಮೃತಿಗೆ ಅನುಗುಣವಾಗಿ ನಾವು ಅರ್ಥವನ್ನು ತಿಳಿಯಬೇಕು.

ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್ ।
ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥೨೨॥

ಪರಮಾತ್ಮ ಪ್ರಾಕೃತಶರೀರಶೂನ್ಯನಾಗಿದ್ದಾನೆ. ಅವಸ್ಥಾನಶಕ್ತಿ ಇಲ್ಲದಿರುವ ನಶ್ವರವಾದ ಶರೀರಾದಿಗಳಲ್ಲಿ ಇದ್ದು ಅವುಗಳಿಗೆ ಶಕ್ತಿಯನ್ನು ನೀಡುತ್ತಾನೆ. ನಶ್ವರವಾದ ಶರೀರಗಳಲ್ಲಿ ಇದ್ದರೂ ತನ್ನಿಮಿತ್ತಕವಾದ ವಿಕಾರರಹಿತನಾಗಿದ್ದಾನೆ. ದೇಶತಃ, ಕಾಲತಃ, ಗುಣತಃ ಮಹಾನ್ ಆಗಿದ್ದಾನೆ. ಸರ್ವಸಮರ್ಥನಾಗಿದ್ದಾನೆ. ವ್ಯಾಪ್ತನಾಗಿದ್ದಾನೆ. ಸರ್ವರಿಗೂ ಸ್ವಾಮಿಯಾಗಿದ್ದಾನೆ. ಇಂತಹ ಭಗವಂತನನ್ನು ತಿಳಿದವರು ಶೋಕಕ್ಕೆ ಒಳಗಾಗುವದಿಲ್ಲ.

ನಾಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥೧.೨.೨೩॥

ಸರ್ವಧಾರಕನಾದ ಭಗವಂತನ ಪ್ರಸಾದ ಅಪರೋಕ್ಷಜ್ಞಾನಕ್ಕೆ ಮತ್ತು ಮುಕ್ತಿಗೆ ಕಾರಣವೆಂದು ಹೇಳಿದ್ದು ಅಯುಕ್ತ, ಪ್ರವಚನಾದಿಗಳಿಂದಲೇ ಜ್ಞಾನ ಮತ್ತು ಮುಕ್ತಿಯಾಗುತ್ತದೆ ಎಂಬ ಶಂಕೆಗೆ ಈ ಮಂತ್ರ ಸಮಾಧಾನವನ್ನು ಹೇಳುತ್ತದೆ.

ಪರಮಾತ್ಮನು ವೇದವ್ಯಾಖ್ಯಾನರೂಪವಾದ ಪ್ರವಚನದಿಂದ ಲಭ್ಯನಾಗುವದಿಲ್ಲ. ಜ್ಞೇಯನೂ ಆಗುವದಿಲ್ಲ. ಯಾವ ವ್ಯಕ್ತಿಗಳೂ ತಮ್ಮ ಪ್ರಜ್ಞಾಪಾಟವದಿಂದ ದೇವರನ್ನು ತಿಳಿಯಲಾಗುವದಿಲ್ಲ. ಅಧಿಕವಾಗಿ ಶಾಸ್ತ್ರಗಳನ್ನು ಶ್ರವಣಮಾಡುತ್ತಿದ್ದರೂ ಭಗವಂತ ಜ್ಞಾನಗೋಚರನಾಗುವದಿಲ್ಲ. ಕಿಂತು ಭಗವಂತ ಪ್ರಸನ್ನನಾಗಿ "ಇವನು ನನ್ನವನು" ಎಂದು ಯಾವ ಜೀವನನ್ನು ಸ್ವೀಕರಿಸುತ್ತಾನೋ ಅವನಿಗೆ ಮಾತ್ರ ಭಗವಂತನ ಜ್ಞಾನವಾಗುತ್ತದೆ. ಅವನಿಗೆ ಭಗವಂತನ ಪ್ರಾಪ್ತಿಯಾಗುತ್ತದೆ. ಶ್ರೀಹರಿಯ ಪರಮಪ್ರಸಾದದಿಂದ ಪೂರ್ವದಲ್ಲಿ ಅವಿದ್ಯಾವೃತವಾಗಿರುವ ಜೀವನ ಸ್ವಸ್ವರೂಪವು ಅವನಿಗೆ ಪ್ರಕಾಶಿತವಾಗುವಂತೆ ಮಾಡುತ್ತಾನೆ.

ಅಥವಾ ಜ್ಞಾನಕ್ಕೆ, ಮೋಕ್ಷಕ್ಕೆ ಹೇತುವಾದ ಅತ್ಯರ್ಥಪ್ರಸಾದವೂ ಕೂಡಾ ಪ್ರವಚನಾದಿ-ಗಳಿಂದ ಲಭ್ಯವಾಗುವದಿಲ್ಲ. ಕಿಂತು ಪರಮಾತ್ಮನ ಪ್ರಸಾದದಿಂದಲೆ ಸಾಧ್ಯವಾಗುತ್ತದೆ ಎಂದು ತಿಳಿಯಬೇಕು.

**ನಾವಿರತೋ ದುಶ್ಚರಿತಾತ್ ನಾಶಾಂತೋ ನಾऽಸಮಾಹಿತಃ ।**
**ನಾಶಾಂತಮನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥೧.೨.೨೪॥**

ಪರಮಾತ್ಮನ ಪ್ರಸಾದದಿಂದ ಅಪರೋಕ್ಷಜ್ಞಾನವಾಗುತ್ತದೆ ಎಂದು ಹೇಳಿದರೆ ಪ್ರವಚನ-ಶ್ರವಣ-ವೈರಾಗ್ಯಾದಿಸಾಧನೆಗಳು ವ್ಯರ್ಥವೆಂಬ ಶಂಕೆ ಬರುತ್ತದೆ. ವೈರಾಗ್ಯಾದಿಸಾಧನೆಗಳು ಸಾಕ್ಷಾತ್ತಾಗಿ ಅಪರೋಕ್ಷಕ್ಕೆ ಸಾಧನೆಯಾಗದಿದ್ದರೂ ಜ್ಞಾನದ್ವಾರಾ ಪ್ರಸಾದಕ್ಕೆ ಹೇತುವಾಗುತ್ತವೆ ಆದ್ದರಿಂದ ವೈರಾಗ್ಯಾದಿಸಾಧನೆಗಳೂ ಅತ್ಯಂತ ಆವಶ್ಯಕವೆಂದು ಈ ಮಂತ್ರ ಪ್ರತಿಪಾದಿಸುತ್ತದೆ.

ಯಾವ ವ್ಯಕ್ತಿಯು ದುಷ್ಟವಾದ ಆಚರಣೆಗಳಿಂದ, ಅರ್ಥಾತ್ ನಿಷಿದ್ಧವಾದ ಕರ್ಮಗಳನ್ನು ಮಾಡುತ್ತಾ ತನ್ನ ಇಂದ್ರಿಯಗಳನ್ನು ನಿಗ್ರಹಿಸುವದಿಲ್ಲವೋ ಅವನು ಭಗವಂತನನ್ನು ಪಡೆಯಲಾರ. ಕಿಂತು ತನ್ನ ಇಂದ್ರಿಯಗಳನ್ನು ಸರಿಯಾಗಿ ನಿಗ್ರಹದಲ್ಲಿರಿಸಿಕೊಂಡವನೇ ಪರಮಾತ್ಮನನ್ನು ಪಡೆಯುತ್ತಾನೆ. ಸದಾಚಾರದಲ್ಲಿ, ಭಗವಂತನ ಜ್ಞಾನದಲ್ಲಿ ನಿಷ್ಠನಾಗದವನು ಶ್ರೀಹರಿಯನ್ನು ಪಡೆಯಲಾರ. ಕಿಂತು ಸತ್ಕರ್ಮಗಳಲ್ಲಿ ನಿಷ್ಠನಾಗಿ ಭಗವಂತನನ್ನು ಯಥಾರ್ಥವಾಗಿ ತಿಳಿದವನು ಮಾತ್ರ ಶ್ರೀಹರಿಯನ್ನು ಪಡೆಯುತ್ತಾನೆ. ಯಥಾವಸ್ತು ಜ್ಞಾನವಿಲ್ಲದವನಿಗೂ ಪರಮಪದ ಪ್ರಾಪ್ತವಾಗುವದಿಲ್ಲ. ಕಿಂತು ಯಥಾರ್ಥಜ್ಞಾನವನ್ನು ಸಂಪಾದನೆ ಮಾಡಿಕೊಂಡವನು ಮಾತ್ರ ಪರಮಪದವನ್ನು ಪಡೆಯುತ್ತಾನೆ. ವಿಷಯಗಳಲ್ಲಿ ಅಲಂಬುದ್ಧಿಯನ್ನು ಪಡೆಯದವನು ಮುಕ್ತಿಯನ್ನು ಪಡೆಯುವುದಿಲ್ಲ. ಕಿಂತು ವಿಷಯಗಳಲ್ಲಿ ಸಮ್ಯಗ್ವೈರಾಗ್ಯವನ್ನು ಸಂಪಾದನೆ ಮಾಡಿದವನು ಮಾತ್ರ ಮುಕ್ತನಾಗುತ್ತಾನೆ. ಇವರು ಕೂಡಾ ಶ್ರೀಹರಿಯ ಅಪರೋಕ್ಷವನ್ನು ಪಡೆದಾಗಲೇ ಮುಕ್ತರಾಗುತ್ತಾರೆಯೇ ಹೊರತು ಅಪರೋಕ್ಷವಿಲ್ಲದೆ ಯಾರಿಗೂ ಮುಕ್ತಿ ಎಂಬುವುದು ಸರ್ವಥಾ ಇರುವದಿಲ್ಲ. ॥೧.೨.೨೪॥

**ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ ।**
**ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥೧.೨.೨೫॥**

ಮುಚ್ಯಮಾನರಾಗುವ ಎಲ್ಲ ಜೀವರಾಶಿಗಳು ವಿಷ್ಣುವನ್ನೇ ಪ್ರವೇಶಿಸುತ್ತಾರೆ. ಆದ್ದರಿಂದ ವಿಷ್ಣು ಮಹಾಶ್ರಯನಾಗಿದ್ದಾನೆ ಎಂಬುದನ್ನು ಈ ಮಂತ್ರ ಪ್ರತಿಪಾದಿಸುತ್ತದೆ.

ಬ್ರಾಹ್ಮಣಜಾತಿಗೆ ಅಭಿಮಾನಿಗಳಾಗಿರುವ ಸ್ವಯಂ ಬ್ರಾಹ್ಮಣರಾಗಿರುವ ಬ್ರಹ್ಮದೇವರು ಮತ್ತು ಕ್ಷತ್ರಿಯಜಾತಿಗೆ ಅಭಿಮಾನಿಗಳಾಗಿ ಸ್ವಯಂ ಕ್ಷತ್ರಿಯರಾಗಿರುವ ವಾಯುದೇವರು ಪ್ರಲಯದ ಅವಸ್ಥೆಯಲ್ಲಿ ಭಗವಂತನಿಗೆ ಆಹಾರವಾಗುತ್ತಾರೆ. ಬ್ರಹ್ಮವಾಯುಗಳು ಅನ್ನಸ್ಥಾನೀಯರಾದರೆ ಮೃತ್ಯುವಿಗೆ ನಿಯಾಮಕರಾಗಿರುವ ರುದ್ರದೇವರು ಮತ್ತು ನಾನು (ಯಮದೇವರು) ಶಾಕ ಹಾಗೂ ಘೃತಸ್ಥಾನೀಯರಾಗಿರುತ್ತೇವೆ.

ಉಪಲಕ್ಷಣಯಾ ಇಲ್ಲಿ ದೇವ, ಋಷಿ, ಪಿತೃ, ಗಂಧರ್ವ, ಮನುಷ್ಯ, ಪಶು, ಪಕ್ಷಿ ಮೊದಲಾದ ನಾನಾಜಾತಿವಿಶಿಷ್ಟವಾದ ಜೀವಸಮುದಾಯವನ್ನು ಗ್ರಹಿಸಬೇಕು. ಈ ಜೀವಸಮುದಾಯವೆಲ್ಲ ಭಗವಂತನಿಗೆ ಆಹಾರರೂಪವಾಗಿರುತ್ತದೆ. ಸರ್ವಮಾರಕನಾದ ಮೃತ್ಯುವನ್ನು ಆಸ್ವಾದನೆ ಮಾಡುವಾಗ ಪ್ರೀತಿವಿಶೇಷವಿರುತ್ತದೆಂದು ತಿಳಿಸುವುದಕ್ಕಾಗಿ ಮೃತ್ಯುವನ್ನು ಪ್ರತ್ಯೇಕವಾಗಿ ಗ್ರಹಣಮಾಡಿದ್ದಾರೆ. ಇಂತು ಚರಾಚರಪ್ರಪಂಚವೆಲ್ಲ ಪ್ರಲಯಕಾಲದಲ್ಲಿ ಭಗವಂತನಿಗೆ ಆಹಾರರೂಪವಾಗುತ್ತದೆ. ಇಂತಹ ಮುಕ್ತಾಮುಕ್ತ-ನಿಯಾಮಕನಾಗಿರುವ ಪರಮಾತ್ಮನ ವೈಭವವನ್ನು ಯಾರು ತಿಳಿಯಲು ಸಾಧ್ಯ. ಸಮಗ್ರವಾಗಿ ಭಗವಂತನ ಸ್ವರೂಪವನ್ನು ಯಾರೂ ತಿಳಿಯಲಾರರು. ಭಗವಂತ ಯಾವ ಬ್ರಹ್ಮದೇವರಲ್ಲಿ ಮತ್ತು ವಾಯುದೇವರಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವನೋ ಅಂತಹ ಬ್ರಹ್ಮವಾಯುಗಳೇ ಭಗವಂತನನ್ನು ವಿಶೇಷವಾಗಿ ತಿಳಿದಿರುವರು. ಅವರು ಕೂಡಾ ಸ್ವಸಾಮರ್ಥ್ಯದಿಂದ ಪರಮಾತ್ಮನನ್ನು ತಿಳಿಯಲಾರರು. ಕಿಂತು ತಮ್ಮಲ್ಲಿ ನಿಯಾಮಕನಾಗಿರುವ ಪರಮಾತ್ಮನ ಪ್ರಸಾದದಿಂದಲೇ ತಿಳಿಯುತ್ತಾರೆ. ಯಾರು ಈ ತತ್ತ್ವವನ್ನು ತಿಳಿಯುತ್ತಾರೋ ಅವರು ಪರಮಾತ್ಮ ಎಲ್ಲಿ ನೆಲೆಸಿದ್ದಾನೋ ಅಲ್ಲಿ ನೆಲೆಸುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ.

ಉಪನಿಷದುಕ್ತವಾದ ಈ ವಿಷಯವನ್ನು "ಭರದ್ವಾಜಸಂಹಿತಾ" ಸ್ಪಷ್ಟವಾಗಿ ತಿಳಿಸುತ್ತದೆ. ಆ ವಚನ ಹೀಗಿದೆ.

ರುದ್ರಂ ಪ್ರಜಾಪತಿಂ ಚೈವ ಗ್ರಸತ್ಯೇಕೋ ಜನಾರ್ದನಃ ।
ನಾಽನ್ಯೋಽಸ್ತಿ ವಿಷ್ಣೋಃ ಸಂಹರ್ತಾ ನಿಯಂತಾ ರಕ್ಷಕಸ್ಸದಾ ॥ ಭಾ.ಸಂ.೨.೮.೧೧॥

ರುದ್ರನನ್ನು, ಪ್ರಜಾಪತಿನಾಮಕರಾದ ಬ್ರಹ್ಮ-ವಾಯುಗಳನ್ನು ಪರಮಾತ್ಮ ಸಂಹರಿಸುತ್ತಾನೆ. ಪರಮಾತ್ಮನನ್ನು ಸಂಹಾರಮಾಡುವವರು ಮತ್ತಾರೂ ಇರುವದಿಲ್ಲ. ಪರಮಾತ್ಮನಿಗೆ ನಿಯಾಮಕರಾಗಲೀ ಅವನನ್ನು ರಕ್ಷಿಸುವವರಾಗಲಿ ಯಾರೂ ಇರುವದಿಲ್ಲ.

॥ ಇತಿ ಶ್ರೀಕಾಠಕಭಾಷ್ಯೇ ಪ್ರಥಮೇಽಧ್ಯಾಯೇ ದ್ವಿತೀಯಾ ವಲ್ಲೀ ॥

## ॥ಅಥ ಶ್ರೀಕಾಠಕಭಾಷ್ಯೇ ಪ್ರಥಮೇऽಧ್ಯಾಯೇ ತೃತೀಯಾ ವಲ್ಲೀ॥

ಋತಂ ಪಿಬಂತೌ ಸುಕೃತಸ್ಯ ಲೋಕೇ
ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ।
ಛಾಯಾತಪೌ ಬ್ರಹ್ಮವಿದೋ ವದಂತಿ
ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ ॥೧.೩.೧॥

''ಋತಂ ಪಿಬಂತೌ'' ಎಂಬ ಮಂತ್ರ ಬುದ್ಧಿಜೀವಪರವಾಗಿದೆ ಎಂದು ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ. ಬುದ್ಧಿಗಾಗಲೀ ಜೀವನಿಗಾಗಲೀ ಹೃದಯಗುಹಾನಿಹಿತತ್ವವು ಇರುವದಿಲ್ಲ. ಆದ್ದರಿಂದ ಈ ಮಂತ್ರ ಭಗವತ್ಪರವಾಗಿದೆ ಎಂದು ತಿಳಿಯಬೇಕು.

ಪುಣ್ಯನಿರ್ಮಿತವಾದ ಶರೀರದ ಹೃದಯಗುಹಾದಲ್ಲಿ ಮತ್ತು ಸರ್ವಜೀವೋತ್ತಮರಾದ, ರುದ್ರಾದಿದೇವತೆಗಳಿಗಿಂತಲೂ ಅತಿಪರಿಪೂರ್ಣವಾದ ಭಕ್ತಿಜ್ಞಾನಾದಿಗಳಿಂದ ಯುಕ್ತರಾದ ವಾಯುದೇವರಲ್ಲಿ ಪರಮಾತ್ಮನ ಆತ್ಮ ಅಂತರಾತ್ಮ ಎಂಬ ಎರಡು ರೂಪಗಳು ಸನ್ನಿಹಿತವಾಗಿವೆ. ಭಗವಂತನ ಈ ಎರಡು ವಿಶಿಷ್ಟವಾದ ರೂಪಗಳು ಸುಕೃತದ ಫಲವನ್ನು ಮಾತ್ರ ಭೋಗಮಾಡುತ್ತವೆ. ಪಂಚಮಹಾಯಜ್ಞಗಳನ್ನು ನಿಷ್ಠೆಯಿಂದ ಅನುಷ್ಠಾನ ಮಾಡುವವರು, ದ್ಯು-ಪರ್ಜನ್ಯ-ಧರಾ-ಪುಮಾನ್-ಸ್ತ್ರೀ ಎಂಬ ಪಂಚಾಗ್ನಿವಿದ್ಯೆಯಲ್ಲಿ ನಿಷ್ಠರಾದವರು ಮತ್ತು ಮೂರುಬಾರಿ ನಾಚಿಕೇತಾಗ್ನಿಯನ್ನು ಚಯನ ಮಾಡಿರುವ ಬ್ರಹ್ಮಜ್ಞಾನಿಗಳು ಈ ರೂಪಗಳ ವಿಶೇಷವನ್ನು ಹೀಗೆ ತಿಳಿಸುತ್ತಾರೆ. ''ಈ ಎರಡು ರೂಪಗಳು ವಿದ್ವಾಂಸರಿಗೆ ಛಾಯೆಯಂತೆ ಸುಖಪ್ರದವಾಗಿವೆ. ಅವಿದ್ವಾಂಸರಿಗೆ ಆತಪದಂತೆ ದುಃಖವನ್ನು ನೀಡುತ್ತವೆ''. ಆದ್ದರಿಂದ ವಾಯುದೇವರ ಹೃದಯಗುಹಾದಲ್ಲಿ ಪರಮಾತ್ಮನ ಉಪಾಸನೆಯನ್ನು ಮಾಡಬೇಕು.

ಯಃ ಸೇತುರೀಜಾನಾನಾಮಕ್ಷರಂ ಬ್ರಹ್ಮ ಯತ್ ಪರಮ್ ।
ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ ॥೧.೩.೨॥

ಈ ಮಂತ್ರದಲ್ಲಿಯ ಏಕವಚನದಿಂದ ಪರಬ್ರಹ್ಮತ್ವಾದಿಲಿಂಗಗಳಿಂದ ದ್ವಿರೂಪನಾದ ವಿಷ್ಣುವೇ ಕರ್ಮಫಲವನ್ನು ಭೋಗಮಾಡುವವನು ಎಂಬ ವಿಷಯ ಸಿದ್ಧವಾಗುತ್ತದೆ.

ಆತ್ಮ ಅಂತರಾತ್ಮ ಎಂದು ದ್ವಿರೂಪನಾದ ಪರಮಾತ್ಮನು ಗುರೂಪದೇಶಪೂರ್ವಕ ಯಾಗಮಾಡುವವರಿಗೆ ಆಧಾರನಾಗಿದ್ದಾನೆ. ಸಂಸಾರವೆಂಬ ನದಿಯನ್ನು ದಾಟುವವರಿಗೆ ಅಭಯವಾದ ಪಾರ ಪರಬ್ರಹ್ಮನಾಗಿದ್ದಾನೆ. ಪಾಪಗಳಿಂದ ಭೀತರಾಗಿ, ಭಕ್ತಿನಮ್ರರಾಗಿ ಭಗವಂತನನ್ನು ಭಜಿಸುವವರಿಗೆ ಆಧಾರನಾಗಿದ್ದಾನೆ. ಉಕ್ತಮಹಾಮಹಿಮೋಪೇತನಾದ, ನಾಚಿಕೇತಾಗ್ನಿಸ್ಥನಾದ ಪರಮಾತ್ಮನ ಮಹಿಮೆಯನ್ನು ನಿನಗೆ ಉಪದೇಶಮಾಡಲು ನಾವು ಶಕ್ತರಾಗಿದ್ದೇವೆ. ನಮ್ಮ ಉಪದೇಶ ಶ್ರೀಹರಿಯ ಧ್ಯಾನಕ್ಕೆ ಉಪಯುಕ್ತವಾಗುತ್ತದೆ.

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ ।**
**ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ತು ॥೧.೩.೩॥**

ಇಂದ್ರಿಯನಿಯಮನವನ್ನು ಅವಶ್ಯವಾಗಿ ಸಂಪಾದಿಸಬೇಕೆಂಬುದನ್ನು ಹೇಳಲು ಇಂದ್ರಿಯನಿಯಮನಕ್ಕೆ ಉಪಯುಕ್ತವಾದ ವಿಷಯವನ್ನು ಇಲ್ಲಿ ಉಪದೇಶಿಸುತ್ತಿದ್ದಾರೆ.

ಶರೀರಿಯಾದ ಜೀವ ರಥದ ಸ್ವಾಮಿಯಾಗಿದ್ದಾನೆ. ಅಶ್ವಸ್ಥಾನೀಯವಾದ ಇಂದ್ರಿಯಗಳಿಂದ ಕರ್ಷಿತವಾಗುತ್ತವೆಯಾದ್ದರಿಂದ ಶರೀರವಿದು ರಥಸ್ಥಾನೀಯವಾಗಿದೆ. ಬುದ್ಧಿ ಇದು ಸಾರಥಿ. ಬುದ್ಧಿಯಿಂದ ವಿಚಾರಿಸಿಯೇ ಮನುಷ್ಯ ಎಲ್ಲ ಕೆಲಸವನ್ನು ಮಾಡುತ್ತಾನೆ. ಮನಸ್ಸು ಇದು ಲಗಾಮು. ಮನಸ್ಸಿನಿಂದ ನಿಯತವಾಗಿಯೇ ಶ್ರೋತ್ರಾದಿಇಂದ್ರಿಯಗಳು ಪ್ರವೃತ್ತವಾಗುತ್ತವೆ.

**ಇಂದ್ರಿಯಾಣಿ ಹಯಾನಾಹುಃ ವಿಷಯಾನ್ ತೇಷು ಗೋಚರಾನ್ ।**
**ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥೪॥**

ಶರೀರವೆಂಬ ರಥವನ್ನು ಎಳೆಯುತ್ತವೆಯಾದ್ದರಿಂದ ಇಂದ್ರಿಯಗಳು ಅಶ್ವಸ್ಥಾನೀಯವಾಗಿವೆ. ಶಬ್ದಾದಿವಿಷಯಗಳಲ್ಲಿಯೇ ಎಲ್ಲ ಇಂದ್ರಿಯಗಳು ಸಂಚರಿಸುತ್ತವೆ ಆದ್ದರಿಂದ ಶಬ್ದಾದಿವಿಷಯಗಳು ಅಶ್ವಸಂಚಾರಕ್ಕೆ ಯೋಗ್ಯವಾದ ದೇಶಗಳೆಂದು ತಿಳಿಯಬೇಕು. ಸಾರಥಿಶೂನ್ಯನಾಗಿರುವ ರಥಿಕ ದುಃಖಕ್ಕೆ ಭಾಜನನಾಗುತ್ತಾನೆ. ಹಾಗೆ ಬುದ್ಧಿಶೂನ್ಯನಾಗಿರುವ ಆತ್ಮನೂ ದುಃಖಿಯಾಗುತ್ತಾನೆ. ಇಂದ್ರಿಯಗಳನ್ನು ಪಡೆದ ಮಾತ್ರಕ್ಕೆ ಜೀವ ಸುಖಿಯಾಗುವದಿಲ್ಲ. ಹೀಗೆ ತಿಳಿಯುವುದು ಭ್ರಮೆ ಮಾತ್ರ. ವಾಸ್ತವವಲ್ಲ. ಪಾಟವಯುಕ್ತವಾಗಿರುವ ಇಂದ್ರಿಯಗಳನ್ನು ಪಡೆದಿದ್ದರೂ ಬುದ್ಧಿಶೂನ್ಯನಾದವನು ದುಃಖಿಯೇ ಆಗುತ್ತಾನೆ. ಬುದ್ಧಿಯುಕ್ತನಾದವನು ಇಂದ್ರಿಯಪಾಟವಶೂನ್ಯನಾಗಿದ್ದರೂ ಸುಖಿಯಾಗುತ್ತಾನೆ. ॥೧.೩.೪॥

**ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥೧.೩.೫॥**

ಅಶ್ವಸ್ಥಾನೀಯವಾದ ಇಂದ್ರಿಯಗಳನ್ನು ಸರಿಯಾಗಿ ನಿಯಮನ ಮಾಡಬೇಕು. ಇದಕ್ಕಾಗಿ ಮನಸ್ಸಿನ ನಿಯಮನ ಮತ್ತು ವಿಜ್ಞಾನದ ಆವಶ್ಯಕತೆ ಇದೆ. ಈ ವಿಷಯವನ್ನು ಈ ಮಂತ್ರಗಳು ಅನ್ವಯವ್ಯತಿರೇಕಗಳಿಂದ ತಿಳಿಸುತ್ತವೆ.

ಯಾವ ವ್ಯಕ್ತಿಯು ಶಾಸ್ತ್ರಜನ್ಯವಾದ ವಿವೇಕರೂಪವಾದ ಸಾರಥಿಯಿಂದ ಶೂನ್ಯನಾಗಿರುವನೋ ಅವನಿಗೆ ಮನಸ್ಸು ಸರ್ವಥಾ ವಶವಾಗುವದಿಲ್ಲ. ಕೆಟ್ಟ ಕುದುರೆಗಳು ಸಾರಥಿಗೆ ಅವಶವಾಗುವಂತೆ ಅಮನಸ್ಕನಾದವನ ಇಂದ್ರಿಯಗಳು ಕೂಡಾ ಅವನಿಗೆ ಅಧೀನವಾಗಿರುವದಿಲ್ಲ. ॥೧.೩.೫॥

**ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥೧.೩.೬॥**

ಯಾವ ವ್ಯಕ್ತಿಯು ಶಾಸ್ತ್ರಜನ್ಯವಾಗಿರುವ ವಿವೇಕದಿಂದ ಸಹಿತನಾಗಿರುವನೋ ಅವನ ಮನಸ್ಸು ಸ್ವಾಧೀನವಾಗಿರುತ್ತದೆ. ಒಳ್ಳೆಯ ಅಶ್ವಗಳು ಹೇಗೆ ಸಾರಥಿಯ ಅಧೀನದಲ್ಲಿರುತ್ತವೋ ಹಾಗೆ ಸಮನಸ್ಕನಾದವನ ಇಂದ್ರಿಯಗಳು ಕೂಡಾ ಅವನ ಅಧೀನದಲ್ಲಿರುತ್ತವೆ. ॥೧.೩.೬॥

**ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಽಶುಚಿಃ ।**
**ನ ಸ ತತ್‌ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥೧.೩.೭॥**

ಇಂದ್ರಿಯಗಳನ್ನು ತನ್ನ ಹತೋಟೆಯಲ್ಲಿಟ್ಟುಕೊಂಡರೆ ಮನಸ್ಸನ್ನು ತನ್ನ ಅಧೀನದಲ್ಲಿಟ್ಟು ಕೊಂಡಿರಬಹುದು. ಅದರಿಂದೇನು ಪ್ರಯೋಜನವೆಂದು ಶಂಕೆ ಬರುತ್ತದೆ. ಇಂದ್ರಿಯಗಳ ಹಾಗು ಮನಸ್ಸಿನ ನಿಗ್ರಹವಿದು ಪರಂಪರಯಾ ಮುಕ್ತಿಗೆ ಉಪಯುಕ್ತವಾಗಿದೆ ಎಂಬ ಭಾವನೆಯಿಂದ ಇಂದ್ರಿಯಗಳನ್ನು ನಿಗ್ರಹಿಸದಿದ್ದರೆ ಮೋಕ್ಷ ಸರ್ವಥಾ ಇರುವದಿಲ್ಲವೆಂದು ಈ ಮಂತ್ರವು ಪ್ರತಿಪಾದಿಸುತ್ತದೆ.

ಯಾವ ವ್ಯಕ್ತಿಯು ತನ್ನ ಮನಸ್ಸನ್ನು ನಿಗ್ರಹಿಸಿಕೊಂಡಿಲ್ಲವೋ ಅವನ ಇಂದ್ರಿಯಗಳು ಯಥೇಷ್ಟವಾಗಿ ವಿಷಯಲಂಪಟವಾಗುತ್ತವೆ. ಆದ್ದರಿಂದ ಅವನು ನಿರಂತರ ಅಶುದ್ಧನಾಗಿರುತ್ತಾನೆ. ಇಂಥವನು ಪರಮಪದವನ್ನು ಪಡೆಯುವುದಿಲ್ಲ. ಮತ್ತೆ ಮತ್ತೆ ಸಂಸಾರದಲ್ಲಿಯೆ ಭ್ರಮಿಸುತ್ತಾನೆ. ॥೧.೩.೭॥

**ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।**
**ಸ ತು ತತ್ಪದಮಾಪ್ನೋತಿ ಯಸ್ಮಾದ್ ಭೂಯೋ ನ ಜಾಯತೇ ॥೮॥**

ಯಾವ ವ್ಯಕ್ತಿಯು ತತ್ತ್ವಜ್ಞಾನವನ್ನು ಪಡೆದಿದ್ದಾನೆಯೋ ತನ್ನ ಮನಸ್ಸನ್ನು ನಿಗ್ರಹಿಸಿ-ಕೊಂಡಿರುವನೋ ಇಂದ್ರಿಯಗಳನ್ನು ವಿಷಯಗಳಿಂದ ದೂರಸರಿಸಿರುವನೋ ಅವನು ಸದಾ ಶುದ್ಧನಾಗಿರುತ್ತಾನೆ. ಇಂಥವನು ಪರಮಪದವನ್ನು ಹೊಂದಿ ಮತ್ತೆ ತಿರುಗಿ ಜನಿಸುವದಿಲ್ಲ. ॥೧.೩.೮॥

**ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ ।**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥೯॥**

ಯಾವ ಸಾಧಕನು ತತ್ತ್ವಜ್ಞಾನವೆಂಬ ಸಾರಥಿಯಿಂದ ಸಹಿತನಾಗಿರುವನೋ, ಸ್ವಾಧೀನವಾದ ಮನಸ್ಸೆಂಬ ಲಗಾಮನ್ನು ಧರಿಸಿರುವನೋ ಅಂಥವನು ಸಂಸಾರವೆಂಬ ಮಾರ್ಗವನ್ನು ದಾಟುತ್ತಾ ಚರಮಗುರಿಯಾಗಿರುವ ಪರಮಾತ್ಮನ ಸ್ಥಾನವನ್ನು ಪಡೆಯುತ್ತಾನೆ. ॥೧.೩.೯॥

**ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ ॥೧.೩.೧೦॥**

**ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।**
**ಪುರುಷಾತ್ ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥೧೧॥**

ಇಂದ್ರಿಯಾದಿಗಳಿಗೆ ಅಭಿಮಾನಿಗಳಾದ ದೇವತೆಗಳ ಧ್ಯಾನವನ್ನು ಭಗವಂತನ ಪರಿವಾರತಯಾ ಅಗತ್ಯವಾಗಿ ಮಾಡುತ್ತಾ ತಾರತಮ್ಯಕ್ಕೆ ಕೊನೆಯಾದವನು ಪರಮಾತ್ಮ ಎಂಬುದಾಗಿ ತಿಳಿದುಕೊಂಡು ಶ್ರೀಹರಿಯ ಧ್ಯಾನವನ್ನು ಮಾಡಬೇಕು. ಇದಕ್ಕಾಗಿ ಆವಶ್ಯಕವಾದ ದೇವತಾತಾರತಮ್ಯವನ್ನು ಈ ಮಂತ್ರವು ತಿಳಿಸುತ್ತದೆ.

ಶ್ರೋತ್ರೇಂದ್ರಿಯಕ್ಕೆ ಅಭಿಮಾನಿಯಾದವನು ಸೋಮ. ತ್ವಗಿಂದ್ರಿಯಾಭಿಮಾನಿ ಕುಬೇರ. ಚಕ್ಷುರಿಂದ್ರಿಯಕ್ಕೆ ಅಭಿಮಾನಿ ಸೂರ್ಯ. ರಸನೇಂದ್ರಿಯಕ್ಕೆ ಜಲಾಧಿಪತಿಯಾದ ವರುಣ ಅಭಿಮಾನಿಯಾಗಿದ್ದಾನೆ. ಘ್ರಾಣೇಂದ್ರಿಯಕ್ಕೆ ಅಶ್ವಿನೀದೇವತೆಗಳು ಅಭಿಮಾನಿಗಳಾಗಿದ್ದಾರೆ. ವಾಗಿಂದ್ರಿಯಕ್ಕೆ ಅಗ್ನಿ, ಪಾಣಿಗಳಿಗೆ ಇಂದ್ರ, ಪಾದಗಳಿಗೆ ಇಂದ್ರನ ಮಗನಾದ ಜಯಂತ, ಪಾಯ್ವಿಂದ್ರಿಯಕ್ಕೆ ಯಮ, ಗುಹ್ಯೇಂದ್ರಿಯಕ್ಕೆ ದಕ್ಷನು ಅಭಿಮಾನಿಯಾಗಿದ್ದಾನೆ. ಎಂಬ ವಿವೇಕವನ್ನು ತಿಳಿದುಕೊಳ್ಳಬೇಕು. ಶ್ರೋತ್ರಾದ್ಯಭಿಮಾನಿಗಳು ಬಹಳ ಇದ್ದಾರೆ. ಹೀಗಾಗಿ ಗ್ರಂಥಾಂತರದಲ್ಲಿ ಅನ್ಯದೇವತೆಗಳ ಹೆಸರು ಬಂದರೂ ವಿರೋಧವನ್ನು ಶಂಕಿಸಬಾರದು. ಇವರೆಲ್ಲ ಇಂದ್ರಿಯಾಭಿಮಾನಿಗಳಾಗಿದ್ದಾರೆ.

ಇನ್ನು ಇಂದ್ರಿಯಾಭಿಮಾನಿಗಳಿಗಿಂತಲೂ ಉತ್ತಮರಾದ ಅರ್ಥಾಭಿಮಾನಿಗಳ ವಿವರವನ್ನು ಹೀಗೆ ತಿಳಿಯಬೇಕು.

ಶಬ್ದ ಹಾಗು ಸ್ಪರ್ಶಕ್ಕೆ ಸುಪರ್ಣಿಯು ಅಭಿಮಾನಿನಿಯಾಗಿದ್ದಾಳೆ. ರೂಪ-ರಸಗಳಿಗೆ ವಾರುಣಿಯು ಅಭಿಮಾನಿನಿಯಾಗಿರುವಳು. ಗಂಧಕ್ಕೆ ಉಮಾದೇವಿಯು ಅಭಿಮಾನಿನಿ-ಯಾಗಿದ್ದಾಳೆ. ಇವುಗಳೆಲ್ಲ ಜ್ಞಾನೇಂದ್ರಿಯವಿಷಯಗಳಾಗಿವೆ.

ಕರ್ಮೇಂದ್ರಿಯವಿಷಯಗಳಿಗೂ ಇದೇರೀತಿಯಾಗಿ ಅಭಿಮಾನಿತ್ವವನ್ನು ತಿಳಿದುಕೊಳ್ಳಬೇಕು. ಅಭಿಜಲ್ಪ ಮತ್ತು ಶಿಲ್ಪಗಳಿಗೆ ಸುಪರ್ಣಿಯು ಅಭಿಮಾನಿನಿಯಾಗಿದ್ದಾಳೆ. ಗತಿ ಮತ್ತು ವಿಸರ್ಗಗಳಿಗೆ ವಾರುಣಿಯು ಅಭಿಮಾನಿನಿಯಾಗಿದ್ದಾಳೆ. ಭೋಗಕ್ಕೆ ಉಮಾದೇವಿಯು ಅಭಿಮಾನಿನಿಯಾಗಿದ್ದಾಳೆ.

**ವಾದಿರಾಜೀಯವಿಶೇಷ-** ಇವರಲ್ಲಿ ತಮ್ಮ ಪದವಿಯನ್ನು ಪಡೆದುದರಿಂದ ಸುಪರ್ಣಿ ಮತ್ತು ವಾರುಣಿಯರು ಎರಡಕ್ಕೆ ಅಭಿಮಾನಿನಿಯರಾಗಿದ್ದಾರೆ. ಉಮಾದೇವಿಯು ತಮ್ಮ ಪದವಿಯನ್ನು ಇನ್ನೂ ಪಡೆಯದಿರುವ ಕಾರಣ ಒಂದಕ್ಕೆ ಮಾತ್ರ ಅಭಿಮಾನಿನಿಯಾಗಿದ್ದಾಳೆ.

ಗರುಡ ಮೊದಲಾದವರು ಮನಸ್ಸಿಗೆ ಅಭಿಮಾನಿಗಳಾಗಿದ್ದಾರೆ. ಇವರು ಅರ್ಥಾಭಿಮಾನಿ-ಗಳಾಗಿರುವ ಸ್ವಸ್ವಪತ್ನಿಗಳಿಗಿಂತಲೂ ಅಧಿಕರಾಗಿದ್ದಾರೆ. ಗರುಡಾದಿಗಳಿಗಿಂತಲೂ ಬುದ್ಧಿಗೆ

ಯಾವ ವ್ಯಕ್ತಿಯು ಶಾಸ್ತ್ರಜನ್ಯವಾಗಿರುವ ವಿವೇಕದಿಂದ ಸಹಿತನಾಗಿರುವನೋ ಅವನ ಮನಸ್ಸು ಸ್ವಾಧೀನವಾಗಿರುತ್ತದೆ. ಒಳ್ಳೆಯ ಅಶ್ವಗಳು ಹೇಗೆ ಸಾರಥಿಯ ಅಧೀನದಲ್ಲಿರುತ್ತವೋ ಹಾಗೆ ಸಮನಸ್ಕನಾದವನ ಇಂದ್ರಿಯಗಳು ಕೂಡಾ ಅವನ ಅಧೀನದಲ್ಲಿರುತ್ತವೆ. ॥೧.೩.೬॥

ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಽಶುಚಿಃ ।
ನ ಸ ತತ್‌ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥೧.೩.೭॥

ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡರೆ ಮನಸ್ಸನ್ನು ತನ್ನ ಅಧೀನದಲ್ಲಿಟ್ಟು ಕೊಂಡಿರಬಹುದು. ಅದರಿಂದೇನು ಪ್ರಯೋಜನವೆಂದು ಶಂಕೆ ಬರುತ್ತದೆ. ಇಂದ್ರಿಯಗಳ ಹಾಗು ಮನಸ್ಸಿನ ನಿಗ್ರಹವಿದು ಪರಂಪರಯಾ ಮುಕ್ತಿಗೆ ಉಪಯುಕ್ತವಾಗಿದೆ ಎಂಬ ಭಾವನೆಯಿಂದ ಇಂದ್ರಿಯಗಳನ್ನು ನಿಗ್ರಹಿಸದಿದ್ದರೆ ಮೋಕ್ಷ ಸರ್ವಥಾ ಇರುವದಿಲ್ಲವೆಂದು ಈ ಮಂತ್ರವು ಪ್ರತಿಪಾದಿಸುತ್ತದೆ.

ಯಾವ ವ್ಯಕ್ತಿಯು ತನ್ನ ಮನಸ್ಸನ್ನು ನಿಗ್ರಹಿಸಿಕೊಂಡಿಲ್ಲವೋ ಅವನ ಇಂದ್ರಿಯಗಳು ಯಥೇಷ್ಟವಾಗಿ ವಿಷಯಲಂಪಟವಾಗುತ್ತವೆ. ಆದ್ದರಿಂದ ಅವನು ನಿರಂತರ ಅಶುದ್ಧನಾಗಿರುತ್ತಾನೆ. ಇಂಥವನು ಪರಮಪದವನ್ನು ಪಡೆಯುವುದಿಲ್ಲ. ಮತ್ತೆ ಮತ್ತೆ ಸಂಸಾರದಲ್ಲಿಯೆ ಭ್ರಮಿಸುತ್ತಾನೆ. ॥೧.೩.೭॥

ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿ ಯಸ್ಮಾದ್ ಭೂಯೋ ನ ಜಾಯತೇ ॥೮॥

ಯಾವ ವ್ಯಕ್ತಿಯು ತತ್ತ್ವಜ್ಞಾನವನ್ನು ಪಡೆದಿದ್ದಾನೆಯೋ ತನ್ನ ಮನಸ್ಸನ್ನು ನಿಗ್ರಹಿಸಿ-ಕೊಂಡಿರುವನೋ ಇಂದ್ರಿಯಗಳನ್ನು ವಿಷಯಗಳಿಂದ ದೂರಸರಿಸಿರುವನೋ ಅವನು ಸದಾ ಶುದ್ಧನಾಗಿರುತ್ತಾನೆ. ಇಂಥವನು ಪರಮಪದವನ್ನು ಹೊಂದಿ ಮತ್ತೆ ತಿರುಗಿ ಜನಿಸುವದಿಲ್ಲ. ॥೧.೩.೮॥

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥೯॥

ಯಾವ ಸಾಧಕನು ತತ್ತ್ವಜ್ಞಾನವೆಂಬ ಸಾರಥಿಯಿಂದ ಸಹಿತನಾಗಿರುವನೋ, ಸ್ವಾಧೀನವಾದ ಮನಸ್ಸೆಂಬ ಲಗಾಮನ್ನು ಧರಿಸಿರುವನೋ ಅಂಥವನು ಸಂಸಾರವೆಂಬ ಮಾರ್ಗವನ್ನು ದಾಟುತ್ತಾ ಚರಮಗುರಿಯಾಗಿರುವ ಪರಮಾತ್ಮನ ಸ್ಥಾನವನ್ನು ಪಡೆಯುತ್ತಾನೆ. ॥೧.೩.೯॥

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ ॥೧.೩.೧೦॥

**ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।**
**ಪುರುಷಾತ್ ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥೧೧॥**

ಇಂದ್ರಿಯಾದಿಗಳಿಗೆ ಅಭಿಮಾನಿಗಳಾದ ದೇವತೆಗಳ ಧ್ಯಾನವನ್ನು ಭಗವಂತನ ಪರಿವಾರತಯಾ ಅಗತ್ಯವಾಗಿ ಮಾಡುತ್ತಾ ತಾರತಮ್ಯಕ್ಕೆ ಕೊನೆಯಾದವನು ಪರಮಾತ್ಮ ಎಂಬುದಾಗಿ ತಿಳಿದುಕೊಂಡು ಶ್ರೀಹರಿಯ ಧ್ಯಾನವನ್ನು ಮಾಡಬೇಕು. ಇದಕ್ಕಾಗಿ ಆವಶ್ಯಕವಾದ ದೇವತಾತಾರತಮ್ಯವನ್ನು ಈ ಮಂತ್ರವು ತಿಳಿಸುತ್ತದೆ.

ಶ್ರೋತ್ರೇಂದ್ರಿಯಕ್ಕೆ ಅಭಿಮಾನಿಯಾದವನು ಸೋಮ. ತ್ವಗಿಂದ್ರಿಯಾಭಿಮಾನಿ ಕುಬೇರ. ಚಕ್ಷುರಿಂದ್ರಿಯಕ್ಕೆ ಅಭಿಮಾನಿ ಸೂರ್ಯ. ರಸನೇಂದ್ರಿಯಕ್ಕೆ ಜಲಾಧಿಪತಿಯಾದ ವರುಣ ಅಭಿಮಾನಿಯಾಗಿದ್ದಾನೆ. ಘ್ರಾಣೇಂದ್ರಿಯಕ್ಕೆ ಅಶ್ವಿನೀದೇವತೆಗಳು ಅಭಿಮಾನಿಗಳಾಗಿದ್ದಾರೆ. ವಾಗಿಂದ್ರಿಯಕ್ಕೆ ಅಗ್ನಿ, ಪಾಣಿಗಳಿಗೆ ಇಂದ್ರ, ಪಾದಗಳಿಗೆ ಇಂದ್ರನ ಮಗನಾದ ಜಯಂತ, ಪಾಯ್ವಿಂದ್ರಿಯಕ್ಕೆ ಯಮ, ಗುಹ್ಯೇಂದ್ರಿಯಕ್ಕೆ ದಕ್ಷನು ಅಭಿಮಾನಿಯಾಗಿದ್ದಾನೆ. ಎಂಬ ವಿವೇಕವನ್ನು ತಿಳಿದುಕೊಳ್ಳಬೇಕು. ಶ್ರೋತ್ರಾದ್ಯಭಿಮಾನಿಗಳು ಬಹಳ ಇದ್ದಾರೆ. ಹೀಗಾಗಿ ಗ್ರಂಥಾಂತರದಲ್ಲಿ ಅನ್ಯದೇವತೆಗಳ ಹೆಸರು ಬಂದರೂ ವಿರೋಧವನ್ನು ಶಂಕಿಸಬಾರದು. ಇವರೆಲ್ಲ ಇಂದ್ರಿಯಾಭಿಮಾನಿಗಳಾಗಿದ್ದಾರೆ.

ಇನ್ನು ಇಂದ್ರಿಯಾಭಿಮಾನಿಗಳಿಗಿಂತಲೂ ಉತ್ತಮರಾದ ಅರ್ಥಾಭಿಮಾನಿಗಳ ವಿವರವನ್ನು ಹೀಗೆ ತಿಳಿಯಬೇಕು.

ಶಬ್ದ ಹಾಗು ಸ್ಪರ್ಶಕ್ಕೆ ಸುಪರ್ಣಿಯು ಅಭಿಮಾನಿನಿಯಾಗಿದ್ದಾಳೆ. ರೂಪ-ರಸಗಳಿಗೆ ವಾರುಣಿಯು ಅಭಿಮಾನಿನಿಯಾಗಿರುವಳು. ಗಂಧಕ್ಕೆ ಉಮಾದೇವಿಯು ಅಭಿಮಾನಿನಿಯಾಗಿದ್ದಾಳೆ. ಇವುಗಳೆಲ್ಲ ಜ್ಞಾನೇಂದ್ರಿಯವಿಷಯಗಳಾಗಿವೆ.

ಕರ್ಮೇಂದ್ರಿಯವಿಷಯಗಳಿಗೂ ಇದೇರೀತಿಯಾಗಿ ಅಭಿಮಾನಿತ್ವವನ್ನು ತಿಳಿದುಕೊಳ್ಳಬೇಕು. ಅಭಿಜಲ್ಪ ಮತ್ತು ಶಿಲ್ಪಗಳಿಗೆ ಸುಪರ್ಣಿಯು ಅಭಿಮಾನಿನಿಯಾಗಿದ್ದಾಳೆ. ಗತಿ ಮತ್ತು ವಿಸರ್ಗಗಳಿಗೆ ವಾರುಣಿಯು ಅಭಿಮಾನಿನಿಯಾಗಿದ್ದಾಳೆ. ಭೋಗಕ್ಕೆ ಉಮಾದೇವಿಯು ಅಭಿಮಾನಿನಿಯಾಗಿದ್ದಾಳೆ.

**ವಾದಿರಾಜೀಯವಿಶೇಷ-** ಇವರಲ್ಲಿ ತಮ್ಮ ಪದವಿಯನ್ನು ಪಡೆದುದರಿಂದ ಸುಪರ್ಣಿ ಮತ್ತು ವಾರುಣಿಯರು ಎರಡಕ್ಕೆ ಅಭಿಮಾನಿನಿಯರಾಗಿದ್ದಾರೆ. ಉಮಾದೇವಿಯು ತಮ್ಮ ಪದವಿಯನ್ನು ಇನ್ನೂ ಪಡೆಯದಿರುವ ಕಾರಣ ಒಂದಕ್ಕೆ ಮಾತ್ರ ಅಭಿಮಾನಿನಿಯಾಗಿದ್ದಾಳೆ.

ಗರುಡ ಮೊದಲಾದವರು ಮನಸ್ಸಿಗೆ ಅಭಿಮಾನಿಗಳಾಗಿದ್ದಾರೆ. ಇವರು ಅರ್ಥಾಭಿಮಾನಿಗಳಾಗಿರುವ ಸ್ವಸ್ವಪತ್ನಿಗಳಿಗಿಂತಲೂ ಅಧಿಕರಾಗಿದ್ದಾರೆ. ಗರುಡಾದಿಗಳಿಗಿಂತಲೂ ಬುದ್ಧಿಗೆ

ಅಭಿಮಾನಿನಿಯರಾದ ಸರಸ್ವತೀ-ಭಾರತಿಯರು ಶ್ರೇಷ್ಠರಾಗಿದ್ದಾರೆ. ಇವರಿಗಿಂತಲೂ ಮಹತ್ತತ್ತ್ವಕ್ಕೆ ಅಭಿಮಾನಿಗಳಾಗಿರುವ ಬ್ರಹ್ಮದೇವರು ಮತ್ತು ಸಕಲಜೀವರಿಗೆ ಸ್ವಾಮಿಯಾಗಿರುವ ವಾಯುದೇವರು ಉತ್ತಮರಾಗಿದ್ದಾರೆ. ಬ್ರಹ್ಮ-ವಾಯುಗಳಿಗಿಂತಲೂ ಅವ್ಯಕ್ತತತ್ತ್ವಕ್ಕೆ ಅಭಿಮಾನಿಗಳಾಗಿರುವ ಲಕ್ಷ್ಮೀದೇವಿಯರು ಶ್ರೇಷ್ಠರಾಗಿದ್ದಾರೆ. ಪೂರ್ಣನಾದುದರಿಂದ ಪುರುಷನಾಮಕನಾದ ಭಗವಂತ ಲಕ್ಷ್ಮೀದೇವಿಗಿಂತಲೂ ಉತ್ತಮನಾಗಿದ್ದಾನೆ. ಈ ಭಗವಂತನಿಗಿಂತಲೂ ಉತ್ತಮರಾದವರು ಯಾವ ದೇಶದಲ್ಲಿಯೂ, ಯಾವ ಕಾಲದಲ್ಲಿಯೂ ಇಲ್ಲ. ಭಗವಂತನೆ ಪೂರ್ಣನಾಗಿದ್ದಾನೆ. ಅವನಿಗಿಂತಲೂ ಪೂರ್ಣರಾದವರು ಮತ್ತೊಬ್ಬರಿಲ್ಲ. ಹೀಗೆ ಸಮಾಧಿಕರಹಿತನಾದದ್ದರಿಂದ ಭಗವಂತನೆ ಸಕಲಜೀವರಾಶಿಗಳಿಗೆ ಉತ್ತಮಗತಿ-ಯಾಗಿದ್ದಾನೆ.

''ಇಂದ್ರಿಯೇಭ್ಯಃ'' ಎಂಬ ಮಂತ್ರ ಜಡವಾದ ಇಂದ್ರಿಯಗಳಲ್ಲಿ ಮಾತ್ರ ತಾರತಮ್ಯವನ್ನು ತಿಳಿಸುತ್ತದೆ ಎಂದು ಅನ್ಯಥಾಪ್ರತೀತಿ ಬರುತ್ತದೆ. ಆದಕ್ಕಾಗಿ ಶ್ರೀಮದಾಚಾರ್ಯರ ವ್ಯಾಖ್ಯಾನ ಇಲ್ಲಿ ಅಗತ್ಯವಿದೆ. ಶ್ರುತಿಯಲ್ಲಿಯ ಈ ಶಬ್ದಗಳು ಅಭಿಮಾನ್ಯಧಿಕರಣನ್ಯಾಯದಿಂದ ತದಭಿಮಾನಿಪರವಾಗಿವೆ ಎಂಬುದನ್ನು ತಿಳಿದುಕೊಳ್ಳಬೇಕು.

ತಾರತಮ್ಯದಲ್ಲಿ ಪರಮಾತ್ಮನೇ ಕೊನೆಯಾಗಿರುವನೆಂದು ತಿಳಿಯಬೇಕು. ಪರಮಾತ್ಮನೆ ಸಕಲರಿಗೂ ಗತಿಯಾಗಿದ್ದಾನೆ. ಆದ್ದರಿಂದ ಅವನು ತಾರತಮ್ಯಕ್ಕೆ ಅವಧಿಯಾಗಿದ್ದಾನೆ. ಅವನಿಗಿಂತಲೂ ಉತ್ತಮರಾದವರು ಮತ್ತೊಬ್ಬರಿಲ್ಲ. ॥೧.೩.೧೧॥

ಏಷು ಸರ್ವೇಷು ಭೂತೇಷು ಗೂಢೋऽತ್ಮಾ ನ ಪ್ರಕಾಶತೇ ।
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥೧೨॥

''ಸುಕೃತಸ್ಯ ಲೋಕೇ'' ಎಂಬ ಮಂತ್ರವು ಭಗವಂತನು ಶರೀರದಲ್ಲಿ ಸ್ಥಿತನಾಗಿದ್ದಾನೆಂದು ಹೇಳುತ್ತದೆ. ಹಾಗಾದರೆ ಶರೀರಸ್ಥಿತನಾದ್ದರಿಂದ ಜೀವ ಹೇಗೆ ಕಾಣಿಸಿಕೊಳ್ಳುತ್ತಾನೋ ಹಾಗೆ ಪರಮಾತ್ಮನೂ ಕಾಣಿಸಿಕೊಳ್ಳಬೇಕು. ಎಂಬ ಶಂಕೆಗೆ ಈ ಮಂತ್ರ ಸಮಾಧಾನವನ್ನು ಹೇಳುತ್ತದೆ.

ಭಗವಂತ ದೇಹಗತನಾಗಿದ್ದರೂ ಅಂತರ್ಹಿತಸ್ವರೂಪದವನಾಗಿದ್ದಾನೆ. ಆದ್ದರಿಂದ ಅವನು ಕಾಣಿಸಿಕೊಳ್ಳುವದಿಲ್ಲ. ಹಾಗಾದರೆ ಅವನ ದರ್ಶನಕ್ಕಾಗಿ ಪ್ರಯತ್ನ ವ್ಯರ್ಥವೆಂದು ತಿಳಿಯಬಾರದು. ಶ್ರವಣಾದಿಗಳಿಂದ ಜನಿತವಾದ, ಶ್ರೀಹರಿಯ ಪ್ರಸಾದದಿಂದ ಸಹಿತವಾದ ಸೂಕ್ಷ್ಮಬುದ್ಧಿ ಯಾರಿಗೆ ಇದೆಯೋ ಅವರಿಗೆ ಮಾತ್ರ ಪರಮಾತ್ಮ ದೃಶ್ಯನಾಗುತ್ತಾನೆ.

ಯಚ್ಛೇದ್ ವಾಕ್ ಮನಸಿ ಪ್ರಾಜ್ಞಸ್ತದ್ ಯಚ್ಛೇಜ್ಞಾನ ಆತ್ಮನಿ ।
ಜ್ಞಾನಮಾತ್ಮನಿ ಮಹತಿ ತದ್ ಯಚ್ಛೇಚ್ಛಾಂತ ಆತ್ಮನಿ ॥೧.೩.೧೩॥

ಇಂದ್ರಿಯಾಭಿಮಾನಿದೇವತೆಗಳಿಗಿಂತಲೂ ಅರ್ಥಾಭಿಮಾನಿಗಳಾದ ದೇವತೆಗಳನ್ನು ಉತ್ತಮರೆಂದು ಚಿಂತಿಸಬೇಕು. ಈ ವಿಷಯವು ಹಿಂದೆ ಪ್ರತಿಪಾದಿತವಾಗಿದೆ. ಇಷ್ಟು ಮಾತ್ರವಲ್ಲ, ಅವರೆಲ್ಲರೂ ಮೇಲಿನ ದೇವತೆಗಳಿಂದ ನಿಯತರಾಗಿದ್ದಾರೆ. ಎಂಬುದನ್ನು ತಿಳಿದುಕೊಳ್ಳಬೇಕು. ಇದನ್ನು ಈ ಮಂತ್ರ ತಿಳಿಸುತ್ತದೆ.

ಇಂದ್ರಿಯಾಭಿಮಾನಿದೇವತೆಗಳು ವಾಗಭಿಮಾನಿದೇವತೆಗಳಾದ ಉಮಾದಿದೇವತೆಗಳಿಗೆ ವಶರಾಗಿದ್ದಾರೆಂದು ಚಿಂತಿಸಬೇಕು. ವಾಗಭಿಮಾನಿನಿಯಾದ ಉಮಾದೇವಿಯು ಮನೋಽಭಿಮಾನಿಗಳಾದ ರುದ್ರದೇವರಿಗೆ ವಶರಾಗಿದ್ದಾರೆಂದು ಧ್ಯಾನಿಸಬೇಕು. ಮನೋಽಭಿಮಾನಿಗಳಾಗಿರುವ ರುದ್ರದೇವರು ಜ್ಞಾನಾಭಿಮಾನಿನಿಯರಾದ ಸರಸ್ವತೀ-ದೇವಿಯರಿಗೆ ವಶರಾಗಿದ್ದಾರೆಂದು ಚಿಂತಿಸಬೇಕು. ಜ್ಞಾನಾಭಿಮಾನಿನಿಯರಾದ ಸರಸ್ವತೀದೇವಿಯರು ಮಹದಭಿಮಾನಿಗಳಾದ ಬ್ರಹ್ಮದೇವರ ನಿಯತಿಗೆ ಒಳಗಾಗಿದ್ದಾರೆಂದು ಚಿಂತಿಸಬೇಕು. ಮಹದಭಿಮಾನಿಗಳಾಗಿರುವ ಬ್ರಹ್ಮದೇವರು ಅವ್ಯಕ್ತತತ್ತ್ವಾಭಿಮಾನಿನಿಯರಾದ ಲಕ್ಷ್ಮೀದೇವಿಯರ ಅಧೀನರಾಗಿದ್ದಾರೆಂದು ಧ್ಯಾನಮಾಡಬೇಕು. ಅವ್ಯಕ್ತಾಭಿಮಾನಿನಿಯರಾದ ಲಕ್ಷ್ಮೀದೇವಿಯರು ಪರಮಾನಂದರೂಪನಾದ ಪರಮಾತ್ಮನಿಗೆ ಅಧೀನಳಾಗಿದ್ದಾಳೆಂದು ಧ್ಯಾನಮಾಡಬೇಕು.

**ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ ।**
**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಃಸ್ತಂ ಕವಯೋ ವದಂತಿ ॥**

ಈರೀತಿಯಾಗಿ ಪ್ರತಿಜ್ಞಾತವಾದ ತತ್ತ್ವವನ್ನು ನಚಿಕೇತನಿಗೆ ಉಪದೇಶಮಾಡಿ ತನ್ನ ಸಭಿಕರನ್ನು ಮತ್ತು ಸಕಲ ಸಾಧುಜನರನ್ನು ಉದ್ದೇಶಿಸಿ ಸರ್ವರಿಗೂ ಹಿತವಾದ ಉಪದೇಶವನ್ನು ಯಮದೇವರು ಈ ಪ್ರಕಾರದಿಂದ ಮಾಡುತ್ತಿದ್ದಾರೆ.

ಹೇ ಅಧಿಕಾರಿಗಳೇ ! ಸಂಸಾರದಲ್ಲಿಯೇ ನಿಷಣ್ಣರಾದ ನೀವೆಲ್ಲರೂ ಎದ್ದೇಳಿ. ನಾನಾವಿಧವಾದ, ವಿಷಪ್ರಾಯವಾದ ವಿಷಯಗಳ ಚಿಂತನೆಯಿಂದ ನೀವೆಲ್ಲ ನಿವೃತ್ತರಾಗಬೇಕು. ಅವಿದ್ಯಾಸುಪ್ತರಾದ ನೀವೆಲ್ಲರೂ ಜಾಗೃತರಾಗಬೇಕು. ಆಲಸ್ಯವನ್ನು ಪರಿತ್ಯಜಿಸಬೇಕು. ಉತ್ತಮರಾದ ಆಚಾರ್ಯರನ್ನು ಪಡೆದು ದೇವತೆಗಳ ತಾರತಮ್ಯವನ್ನು ತಿಳಿಯಬೇಕು. ಸರ್ವೋತ್ತಮವಾದ ಭಗವತ್ಸ್ವರೂಪವನ್ನು ತಿಳಿದುಕೊಳ್ಳಬೇಕು. ಸಂಸಾರದ ನಿವೃತ್ತಿಗೆ ಜ್ಞಾನದ ಹೊರತು ಬೇರೆ ಉಪಾಯವಿಲ್ಲ. ಈ ಸಂಸಾರ ಕ್ಷುರಧಾರೆಯಂತೆ ನಿಶಿತ. ಕ್ಷುರದ ಧಾರೆಯ ಮೇಲೆ ನಡೆಯುವವರು ಪದೇಪದೇ ತೀವ್ರವಾದ ವೇದನೆಯನ್ನು ಅನುಭವಿಸುತ್ತಾರೆ. ಹಾಗೆ ಸಂಸಾರವೂ ಕೂಡಾ ಹಸಿವೆ-ನೀರಡಿಕೆ ಮೊದಲಾದ ಉಪದ್ರವಗಳಿಂದ, ಜನನ-ಮರಣ -ನರಕಯಾತನಾದಿ ಉಪದ್ರವಗಳಿಂದ ಪದೇಪದೇ ದುಃಖದಾಯಕವಾಗಿದೆ. ಆದ್ದರಿಂದ ಸಂಸಾರವಿದು ಕ್ಷುರಧಾರಾಸದೃಶವಾಗಿದೆ. ಹೀಗಾಗಿ ಇದನ್ನು ದಾಟುವುದು ಸಾಧ್ಯವಿಲ್ಲ.

ಶ್ರೀಹರಿಯ ಅಪರೋಕ್ಷಜ್ಞಾನದ ಹೊರತು ಈ ಸಂಸಾರತರಣರೂಪವಾದ ಮುಕ್ತಿಯನ್ನು ಪಡೆಯಲು ಸಾಧ್ಯವಿಲ್ಲವೆಂದು ಕವಿಗಳು ಹೇಳುತ್ತಾರೆ.

ಶ್ರವಣ-ಮನನ-ಧ್ಯಾನರೂಪವಾದ, ವೈರಾಗ್ಯಭಕ್ತ್ಯಾದ್ಯಂಗಗಳಿಂದ ಸಹಿತವಾದ ಮಾರ್ಗದಿಂದ ಸಂಸಾರನಿವರ್ತಕನಾದ ಪರಬ್ರಹ್ಮನು ಪ್ರಾಪ್ಯನಾಗಿರುವನು. ಅವನ ಜ್ಞಾನ ಕಷ್ಟಸಾಧ್ಯ. ಹೀಗೆಂದು ಎಲ್ಲ ಜ್ಞಾನಿಗಳು ಹೇಳುತ್ತಾರೆ. ಯಾರಿಗೂ ಜ್ಞಾನದ ಪ್ರಾಪ್ತಿಯು ಸುಲಭವಾದ ಉಪಾಯದಿಂದ ಪ್ರಾಪ್ತವಾಗುವದಿಲ್ಲ. ಆದ್ದರಿಂದ ಈ ವಿಷಯದಲ್ಲಿ ಜಾಗರ ಎಲ್ಲರಿಗೂ ಆವಶ್ಯಕ. ||೧.೩.೧೪||

ಅಶಬ್ದಮಸ್ಪರ್ಶಮರೂಪಮವ್ಯಯಂ
ತಥಾऽರಸಂ ನಿತ್ಯಮಗಂಧವಚ್ಚ ಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ
ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ ||೧.೩.೧೫||

ಪರಬ್ರಹ್ಮ ದುರ್ಜ್ಞೇಯ ಎಂದು ಪೂರ್ವಮಂತ್ರದಲ್ಲಿ ಪ್ರತಿಪಾದಿತವಾಗಿದೆ. ಶ್ರೋತ್ರಮೊದಲಾದ ಯಾವುದೇ ಇಂದ್ರಿಯಗಳಿಗೆ ಭಗವಂತ ಗೋಚರನಲ್ಲ. ಆದ್ದರಿಂದ ಅವನು ದುರ್ಗಮ ಎಂಬುದನ್ನು ಈ ಮಂತ್ರ ತಿಳಿಸುತ್ತದೆ. ಶ್ರೋತ್ರಾದಿಇಂದ್ರಿಯಗಳಿಗೆ ವಿಷಯನಾಗದಿದ್ದರೂ, "ಭಗವಂತ ಸರ್ವರಿಗಿಂತಲೂ ಪರನಾಗಿದ್ದಾನೆ" ಇತ್ಯಾದಿಯಾಗಿ ಗುರೂಪದೇಶಾದಿಗಳಿಂದ ನಿರ್ಧಾರ ಮಾಡಿಕೊಳ್ಳಬೇಕು. ಅವರಿಗೆ ಮಾತ್ರ ಪರಮಾತ್ಮ ಗೋಚರನಾಗುತ್ತಾನೆ. ಎಂದು ಈ ಮಂತ್ರ ತಿಳಿಸುತ್ತದೆ.

ಶಬ್ದವೆಂಬ ಗುಣದಿಂದ ರಹಿತನಾಗಿದ್ದಾನೆ ಪರಮಾತ್ಮ ಶಬ್ದಗಳಿಂದ ಪರಮಾತ್ಮನನ್ನು ತಿಳಿಯುವುದು ಮತ್ತು ತಿಳಿಸುವುದು ಸಾಧ್ಯವಿಲ್ಲ. ಅವನು ಅತ್ಯಾಶ್ಚರ್ಯಸ್ವರೂಪದವನಾಗಿ-ದ್ದಾನೆ. ಸ್ಪರ್ಶಗುಣಹೀನನಾಗಿದ್ದಾನೆ. ಆದ್ದರಿಂದ ತ್ವಗಿಂದ್ರಿಯದಿಂದ ಗ್ರಾಹ್ಯನಾಗುವದಿಲ್ಲ. ರೂಪರಹಿತನಾಗಿದ್ದಾನೆ ಆದ್ದರಿಂದ ಚಕ್ಷುರಿಂದ್ರಿಯವಿಷಯನಾಗುವದಿಲ್ಲ. ಭೌತಿಕವಾದ ಕಾಯ ಅವನಿಗೆ ಇಲ್ಲ. ಆದ್ದರಿಂದ ನಾಶಶೂನ್ಯನಾಗಿದ್ದಾನೆ. "ರೂಪಾದಿಮತ್ವಾಚ್ಚ ವಿಪರ್ಯಯೋ ದರ್ಶನಾತ್" ಎಂಬ ಸೂತ್ರದಲ್ಲಿ ಭೌತಿಕರೂಪ ಇದು ಅನಿತ್ಯವೆಂದು ತಿಳಿಸಿದ್ದಾರೆ. ಭಗವಂತ ರಸಶೂನ್ಯನಾಗಿದ್ದಾನೆ. ಆದ್ದರಿಂದ ರಸನೇಂದ್ರಿಯಕ್ಕೆ ವಿಷಯನಾಗುವದಿಲ್ಲ. ಗಂಧರಹಿತನೂ ಆಗಿದ್ದಾನೆ ಆದ್ದರಿಂದ ಘ್ರಾಣೇಂದ್ರಿಯವಿಷಯನಾಗುವದಿಲ್ಲ. ಹೀಗೆ ಯಾವ ಇಂದ್ರಿಯಕ್ಕೂ ಪರಮಾತ್ಮ ವಿಷಯನಾಗುವದಿಲ್ಲ. ಪರಬ್ರಹ್ಮ ಅಪ್ರಾಕೃತನಾಗಿದ್ದಾನೆ. ಆದ್ದರಿಂದ ಪ್ರಾಕೃತವಾದ ಯಾವ ಇಂದ್ರಿಯಗಳಿಂದಲೂ ಗೋಚರನಾಗಲು ಸಾಧ್ಯವಿಲ್ಲ. ಭಗವಂತ ಶಶ್ವದೇಕಪ್ರಕಾರನಾಗಿದ್ದಾನೆ. ಪಂಚಮಹಾಭೂತವಿಲಕ್ಷಣನಾಗಿದ್ದಾನೆ. ಅನಾದಿಯಾಗಿದ್ದಾನೆ. ಅರ್ಥಾತ್ ಪರಾಧೀನಪ್ರಾಪ್ತಿ ಮೊದಲಾದ ಯಾವುದೇ ರೀತಿಯಾದ ಉತ್ಪತ್ತಿ ಭಗವಂತನಿಗೆ

ಇರುವದಿಲ್ಲ. ದೇಶತಃ-ಕಾಲತಃ-ಗುಣತಃ ಪರಿಚ್ಛೇದ ಪರಮಾತ್ಮನಿಗಿಲ್ಲ. ಆದ್ದರಿಂದ ಅನಂತನಾಗಿದ್ದಾನೆ. ಚತುರ್ಮುಖನಿಗಿಂತಲೂ ಉತ್ತಮನಾಗಿದ್ದಾನೆ. ಆದ್ದರಿಂದ ಮಹತಃ ಪರನಾಗಿದ್ದಾನೆ. ಇಂತಹ ಪರಮಾತ್ಮನು ತಾರತಮ್ಯದ ಕೊನೆಯಲ್ಲಿರುತ್ತಾನೆ ಅರ್ಥಾತ್ ಸರ್ವೋತ್ತಮನಾಗಿದ್ದಾನೆ ಎಂಬುದಾಗಿ ತಿಳಿದು ಚಿಂತಿಸಬೇಕು. ಭಗವಂತ ಶ್ರವಣಾದ್ಯ-ಗೋಚರನಾಗಿದ್ದರೂ ಸದಾಚಾರತತ್ಪರರಾದ ಗುರುಗಳ ಅನುಗ್ರಹದಿಂದ ಲಬ್ಧವಾದ ಶ್ರವಣ-ಮನನ-ಧ್ಯಾನಗಳ ಅನುಷ್ಠಾನದಿಂದ ಪ್ರಸನ್ನನಾಗುತ್ತಾನೆ. ತನ್ನ ಭಕ್ತರಿಗೆ ಸ್ವಾಪರೋಕ್ಷವನ್ನು ನೀಡಿ ಭವಬಂಧನವನ್ನು ಪರಿಹರಿಸುತ್ತಾನೆ. ||೧.೩.೧೫||

**ವೇದೇಶಿಯವಿಶೇಷ** - "ಅನಾದ್ಯನಂತಂ ಮಹತಃ ಪರಮ್" ಎಂಬ ವಾಕ್ಯದಲ್ಲಿ ಅವ್ಯಕ್ತತತ್ತ್ವವು ಪ್ರತಿಪಾದಿತವಾಗಿದೆ. ಯಾಕೆಂದರೆ ಇಲ್ಲಿಯ ಲಿಂಗ "ಮಹತಃ ಪರತ್ವ." ಇದು ಅವ್ಯಕ್ತತತ್ತ್ವಕ್ಕೆ ಇರುತ್ತದೆ. ಆದ್ದರಿಂದ ಅವ್ಯಕ್ತತತ್ತ್ವವೇ ಪ್ರಸ್ತುತವಾಗಿದೆ. "ಮಹಾಂತಂ ಚ ಸಮಾವೃತ್ಯ ಪ್ರಧಾನಂ ಸಮವಸ್ಥಿತಮ್" ಎಂಬ ಪ್ರಮಾಣದಿಂದ ಮತ್ತು "ಮಹತಃ ಪರಮವ್ಯಕ್ತಮ್" ಎಂಬ ಪ್ರಮಾಣವಚನಕ್ಕೆ ಅನುಗುಣವಾಗಿ ಮಹತಃ ಪರತ್ವೇನ ಪ್ರಕೃತವಾದದ್ದು ಅವ್ಯಕ್ತವೇ ಎಂದು ಕೆಲವರು ತಿಳಿಸುತ್ತಾರೆ.

ಇದು ಸರಿಯಲ್ಲ. ಮೋಕ್ಷಕ್ಕಾಗಿ ಅವ್ಯಕ್ತದ ಪರಿಜ್ಞಾನ ಆವಶ್ಯಕವಲ್ಲ. "ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್" ಎಂಬ ವಚನದಿಂದ ಇದು ವಿಷ್ಣುವಿನ ಪ್ರಕರಣವೆಂದು ತಿಳಿದುಬರುತ್ತದೆ. ಇಲ್ಲಿ ನಚಿಕೇತ ಪ್ರಾರ್ಥನೆ ಮಾಡಿದ ವರಗಳು ಮೂರೇ ಆಗಿವೆ. ಅದರಲ್ಲಿ ಮೊದಲನೆದ್ದು ಪಿತೃಸೌಮನಸ್ಯ, ಎರಡನೆಯದಾಗಿ ಸ್ವರ್ಗಸಾಧನಭೂತವಾದ ಅಗ್ನಿನಾಮಕನಾದ ಭಗವಂತನ ಪರಿಜ್ಞಾನ, ಮೂರನೆಯದಾಗಿ ಮುಕ್ತಜೀವನಿಯಾಮಕನಾದ ಪರಮಾತ್ಮನ ಜ್ಞಾನ. ಇವಿಷ್ಟು ಪ್ರಶ್ನೆಗಳು ಮಾತ್ರ ಇಲ್ಲಿ ಪ್ರಕೃತವಾಗಿವೆ. ಇಂತಹ ಸಂದರ್ಭದಲ್ಲಿ ಅವ್ಯಕ್ತದ ವಿಷಯವನ್ನು ತಿಳಿಸುವುದು ಅಪ್ರಸ್ತುತವಾಗುತ್ತದೆ. ಆದ್ದರಿಂದ ಪರಮಾತ್ಮನೇ ಇಲ್ಲಿ ಪ್ರಕೃತನಾಗಿದ್ದಾನೆ ಎಂಬುದಾಗಿ ತಿಳಿಯಬೇಕು. ಪರಮಾತ್ಮನನ್ನು ತಿಳಿಯುವುದಕ್ಕಾಗಿ "ಮಹತಃ ಪರತ್ವ" ಎಂಬ ಲಿಂಗ ಬಾಧಕವಾಗಲಾರದು. ಯಾಕೆಂದರೆ "ಮಹತೋ ಮಹೀಯಾನ್" ಎಂಬುದಾಗಿ ಮಹತಃ ಪರತ್ವವನ್ನು ಪರಮಾತ್ಮನಿಗೆ ಸ್ವಯಂ ಶ್ರುತಿಯೇ ಹೇಳುತ್ತದೆ.

ಇಷ್ಟಲ್ಲದೆ ಮಹತಃ ಪರಮವಾದ ಅವ್ಯಕ್ತಕ್ಕೂ ಉತ್ತಮನಾಗಿದ್ದಾನೆ ಪರಮಾತ್ಮ ಅಂದಮೇಲೆ ಇಂಥವನಿಗೆ ಮಹತಃ ಪರತ್ವವು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ.

ಆದರೂ ಅವ್ಯಕ್ತಪರತ್ವವನ್ನು ಹೇಳುವದನ್ನು ಪರಿತ್ಯಜಿಸಿ ಮಹತಃ ಪರತ್ವವನ್ನು ವಿಶೇಷವಾಗಿ ಹೇಳುವದಕ್ಕೆ ಕಾರಣವನ್ನು ಹೀಗೆ ತಿಳಿದುಕೊಳ್ಳಬೇಕು. ಅವ್ಯಕ್ತತತ್ತ್ವಾಭಿಮಾನಿನಿಯಾದವಳು ರಮಾದೇವಿ. ಅವಳು ಪರಮಾತ್ಮನ ಭಾರ್ಯೆಯಾಗಿದ್ದಾಳೆ. ತನ್ನ ಭಾರ್ಯೆಗಿಂತಲೂ ಪರತ್ವ ಪರಮಾತ್ಮನಿಗೆ ಸ್ವತಃ ಸಿದ್ಧವಾಗಿದೆ. ಅದನ್ನು ಪ್ರತ್ಯೇಕವಾಗಿ ತಿಳಿಸುವ ಕಾರಣವಿಲ್ಲ. ಆದ್ದರಿಂದ ಮಹತಃ ಪರತ್ವವನ್ನು ಇಲ್ಲಿ ಹೇಳಿದ್ದಾರೆ.

**ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಮ್ ।**
**ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ ॥**

ಇಲ್ಲಿಯವರೆಗೆ ವೇದಪುರುಷ ಯಮ-ನಚಿಕೇತರ ಸಂವಾದವನ್ನು ಅನುವಾದ ಮಾಡಿ ಸಾಧುಗಳಿಗೆ ಶಿಕ್ಷಣೆಯನ್ನು ನೀಡಿ ಈ ವಿದ್ಯೆಯ ಪ್ರವಚನ ಮತ್ತು ಶ್ರವಣಗಳ ಫಲವನ್ನು ಹೇಳುತ್ತಾ ಪೂರ್ವೋಕ್ತವಿದ್ಯೆಯ ಮಹಿಮೆಯನ್ನು ವೇದಪುರುಷ ಪ್ರಶಂಸಿಸುತ್ತಾ ಈ ಅಧ್ಯಾಯವನ್ನು ಪರಿಸಮಾಪ್ತಿಗೊಳಿಸುತ್ತಿದ್ದಾನೆ.

ನಾಚಿಕೇತಾಗ್ನಿಸ್ಥನಾದ ಭಗವಂತನ ವಿಷಯವನ್ನು ಶ್ರವಣಮಾಡಿದವರು ತತ್ತ್ವಜ್ಞಾನಿಗಳಾಗಿದ್ದರೆ ವಿರಿಂಚಲೋಕವನ್ನು ಪಡೆಯುತ್ತಾರೆ. ತತ್ತ್ವದರ್ಶಿಗಳಾಗಿದ್ದರೆ ವಿಷ್ಣುಲೋಕವನ್ನು ಪಡೆಯುತ್ತಾರೆ. ಅನಾದಿಕಾಲದಿಂದ ಏಕಪ್ರಕಾರವಾಗಿ ಎಲ್ಲರಿಂದಲೂ ಜ್ಞೇಯನಾದ ಶ್ರೀಹರಿಯ ಮಹಿಮೆಯನ್ನು ಉಪದೇಶಿಸುವವರು ಮತ್ತು ಶ್ರವಣಮಾಡುವವರು ವಿಷ್ಣುಲೋಕವನ್ನು ಪಡೆಯುತ್ತಾರೆ.

**ಯ ಇಮಂ ಪರಮಂ ಗುಹ್ಯಂ ಶ್ರಾವಯೇದ್ ಬ್ರಹ್ಮಸಂಸದಿ ।**
**ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ**
**ತದಾನಂತ್ಯಾಯ ಕಲ್ಪತ ಇತಿ ॥೧.೩.೧೭॥**

ಸ್ಥಾನವಿಶೇಷದಲ್ಲಿ ಮತ್ತು ಶ್ರಾದ್ಧಾದಿರೂಪವಾದ ಕಾಲವಿಶೇಷದಲ್ಲಿ ಸ್ತೋತ್ರವನ್ನು ಪಠಿಸುವಂತೆ ಈ ವಿದ್ಯೆಯನ್ನು ಪಠಿಸುವುದರಿಂದ ಲಭ್ಯವಾಗುವ ಫಲವನ್ನು ಈ ಮಂತ್ರವು ಪ್ರತಿಪಾದಿಸುತ್ತದೆ.

ಅತಿರಹಸ್ಯವಾದ ಈ ವಿದ್ಯೆಯನ್ನು ಯೋಗ್ಯನಾದ ಬ್ರಾಹ್ಮಣನಿಗೆ ಉಪದೇಶ ಮಾಡುವುದರಿಂದ ಅತಿಶಯಿತವಾದ ಫಲವು ಪ್ರಾಪ್ತವಾಗುತ್ತದೆ. ಮತ್ತು ಪಿತೃಗಳ ಉದ್ದೇಶದಿಂದ ಮಾಡುವ ಶ್ರಾದ್ಧಕಾರ್ಯದಲ್ಲಿ ಯಾರು ಇದನ್ನು ಪ್ರಯತ್ನಪೂರ್ವಕವಾಗಿ ಶ್ರದ್ಧಾಭಕ್ತಿಗಳಿಂದ ಪಠಿಸುತ್ತಾರೆಯೋ ಅವರಿಗೆ ಅನಂತವಾದ ಫಲವು ಪ್ರಾಪ್ತವಾಗುತ್ತದೆ. ॥೧.೩.೧೭॥

ಆದ್ದರಿಂದ ಯಥಾಶಕ್ತಿ ಈ ವಿದ್ಯೆಯ ಪ್ರವಚನವನ್ನು, ಶ್ರವಣವನ್ನು ಮಾಡುತ್ತಿರಬೇಕು. ಇಲ್ಲಿ ಹೇಳಿರುವ ಎಲ್ಲ ವಿಷಯಗಳು ಸತ್ಯವಾಗಿವೆ ಯಥಾರ್ಥವಾಗಿವೆ ಎಂಬುದನ್ನು ತಿಳಿಸುವದಕ್ಕಾಗಿ ವೇದಪುರುಷ ಅಂತ್ಯದಲ್ಲಿ ''ತದಾನಂತ್ಯಾಯ ಕಲ್ಪತೇ ತದಾನಂತ್ಯಾಯ ಕಲ್ಪತೇ'' ಎಂದು ಎರಡು ಬಾರಿ ಹೇಳಿದ್ದಾನೆ.

॥ ಇತಿ ಪ್ರಥಮೇಽಧ್ಯಾಯೇ ತೃತೀಯಾ ವಲ್ಲೀ ॥
॥ ಇತಿ ಕಾಠಕೋಪನಿಷದಿ ಪ್ರಥಮೋಽಧ್ಯಾಯಃ ॥

## ॥ಅಥ ಶ್ರೀಕಾಠಕಭಾಷ್ಯೇ ದ್ವಿತೀಯೇಽಧ್ಯಾಯೇ ದ್ವಿತೀಯೋಽಧ್ಯಾಯಃ ॥

ಪರಾಂಚಿ ಖಾನಿ ವ್ಯತೃಣಾತ್ ಸ್ವಯಂಭೂಃ
ತಸ್ಮಾತ್ ಪರಾಕ್ ಪಶ್ಯತಿ ನಾಽಂತರಾತ್ಮನ್ ।
ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮೈಕ್ಷತ್
ಆವೃತ್ತಚಕ್ಷುರಮೃತತ್ವಮಿಚ್ಛನ್ ॥೨.೧.೧॥

ಬ್ರಹ್ಮವಿದ್ಯೆಗೆ ಅಧಿಕಾರಿಯಾಗಬೇಕಾದರೆ ವೈರಾಗ್ಯವು ಅವಶ್ಯಸಂಪಾದ್ಯವಾಗಿದೆ ಎಂದು ತಿಳಿಸುತ್ತಾ ಬ್ರಹ್ಮಸ್ವರೂಪವನ್ನು ಈ ಅಧ್ಯಾಯದಿಂದ ಪ್ರತಿಪಾದಿಸುತ್ತಿದ್ದಾರೆ.

ಪುರುಷರ ಲೌಕಿಕವಾದ ಇಂದ್ರಿಯಗಳೆಲ್ಲ ಕುತ್ಸಿತವಾದ ವಿಷಯಗಳಲ್ಲಿ ಆಸಕ್ತವಾಗಿರುವಂತೆ ಹೊರಗೆ ಸೃಷ್ಟಿಸಿದ್ದಾನೆ ಭಗವಂತ. ಇಂತಹ ಇಂದ್ರಿಯಗಳನ್ನು ವಶಪಡಿಸಿಕೊಳ್ಳುವದು ಸುಲಭವಲ್ಲ. ಗುರುಗಳ ಅನುಗ್ರಹವನ್ನು ಪಡೆದವರಿಗೆ ಮಾತ್ರ ಇಂದ್ರಿಯಗಳು ವಶವಾಗುತ್ತವೆ. ಗುರುಗಳ ನಿಗ್ರಹಕ್ಕೆ ಪಾತ್ರನಾದವನ ಇಂದ್ರಿಯಗಳು ಸರ್ವಥಾ ಸದ್ವಿಷಯದಲ್ಲಿ ಆಸಕ್ತವಾಗುವುದಿಲ್ಲ. ಮತ್ತು ಅಲೌಕಿಕವಾದ ಇಂದ್ರಿಯಗಳನ್ನು ವಿಷಯವ್ಯಾವೃತ್ತವಾಗುವಂತೆ ಮಾಡಿದ್ದಾನೆ ಭಗವಂತ. ಆದ್ದರಿಂದ ವಿಷಯವ್ಯಾವೃತ್ತವಾದ ಇಂದ್ರಿಯಗಳಿಂದ ಪುರುಷನು ವಿಷಯಗಳಲ್ಲಿ ವ್ಯಾಪೃತನಾಗುವದಿಲ್ಲ. ವಿಷಯಾಸಕ್ತನಾಗುವದಿಲ್ಲ. ಕಿಂತು ಆಂತರನಾದ ಪರಮಾತ್ಮನಲ್ಲಿಯೇ ಆಸಕ್ತನಾಗುತ್ತಾನೆ. ಆದ್ದರಿಂದ ಗುರುಗಳ ಪ್ರಸಾದಕ್ಕೆ ಪಾತ್ರನಾದ, ಧೀರ-ನಾದ ವ್ಯಕ್ತಿಯು ಮೋಕ್ಷವನ್ನು ಬಯಸಿ ತನ್ನ ಲೌಕಿಕವಾದ ಇಂದ್ರಿಯಗಳನ್ನು ವಿಷಯಗಳಿಂದ ತಿರುಗಿಸಿ ಅಂತರಾತ್ಮನಾದ ಪರಮಾತ್ಮನಲ್ಲಿ ನಿಷ್ಠವಾಗುವಂತೆ ಮಾಡಬೇಕು.

ಪರಾಚಃ ಕಾಮಾನನುಯಂತಿ ಬಾಲಾ-
ಸ್ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್ ।
ಅಥ ಧೀರಾ ಅಮೃತತ್ವಂ ವಿದಿತ್ವಾ
ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ ॥೨.೧.೨॥

ಮುಮುಕ್ಷುವಾದವನು ದಿಕ್ಕು ತಪ್ಪಿಸುವ ವಿಷಯಗಳಲ್ಲಿ ಸರ್ವಥಾ ಮಗ್ನನಾಗಬಾರದು. ಈ ಅಭಿಪ್ರಾಯದಿಂದ ಪೂರ್ವೋಕ್ತವಾದ ವಿಷಯವನ್ನೇ ಈ ಮಂತ್ರದಲ್ಲಿ ವಿವರಿಸುತ್ತಿದ್ದಾರೆ.

ಬಾಲಕರು ಅರ್ಥಾತ್ ಅವಿವೇಕಿಗಳಾದವರು ಬಾಹ್ಯವಾದ ಕಾಮನೆಗಳನ್ನು ಅಪೇಕ್ಷಿಸುತ್ತಾರೆ. ಆದ್ದರಿಂದ ಅವರು ಸರ್ವದೇಶಕಾಲದಲ್ಲಿ ವ್ಯಾಪ್ತವಾಗಿರುವ ಮೃತ್ಯುವಿನ ಪಾಶಕ್ಕೆ ತುತ್ತಾಗುತ್ತಾರೆ. ಅರ್ಥಾತ್ ಮೃತರಾಗುತ್ತಾರೆ. ಆದ್ದರಿಂದ ಧೀರರಾದವರು ಮೋಕ್ಷವನ್ನು ನಿತ್ಯವೆಂದು ತಿಳಿದು ಅಶಾಶ್ವತವಾದ ಫಲಕಾಮನೆಯನ್ನು ಸರ್ವಥಾ ಮಾಡುವದಿಲ್ಲ.

**ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ ।**
**ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ । ಏತದ್ ವೈ ತತ್ ॥೩॥**

ಇಷ್ಟು ಉಪದೇಶಮಾಡಿದ ನಂತರವೂ ಸ್ವಯಂ ವಿಷಯವೈರಾಗ್ಯಸಂಪನ್ನನಾದುದರಿಂದ ಮತ್ತೆ ಜೀವನಿಯಾಮಕವಾದ ಭಗವತ್ಸ್ವರೂಪವನ್ನೆ ತಿಳಿಯಲು ಪ್ರಶ್ನಿಸುತ್ತಿದ್ದಾನೆ ನಚಿಕೇತ.

ಜಗತ್ಸ್ರಷ್ಟವಾದ, ಇಂದ್ರಿಯಪ್ರೇರಕನಾದ, ಅಂತರಾತ್ಮನಾದ ಯಾವ ಪರಮಾತ್ಮನ ಪ್ರಸಾದದಿಂದ ರೂಪರಸಾದಿಗಳನ್ನು ನೊಡಲು ಜೀವನು ಸಮರ್ಥನಾಗುವನೋ ಅಂತಹ ಸ್ವತಂತ್ರನಾದ ಪರಮಾತ್ಮ ಮುಕ್ತಜೀವನಿಗೂ ನಿಯಾಮಕನಾಗಿ ಇರುತ್ತಾನೋ ಇಲ್ಲವೋ ? ಈ ತತ್ತ್ವವನ್ನು ನನಗೆ ತಿಳಿಸಬೇಕೆಂದು ಯಮದೇವರಿಗೆ ನಚಿಕೇತ ಪ್ರಶ್ನಿಸುತ್ತಾನೆ.

ಅತಿಗೊಪ್ಯವಾದ ವಿಷಯವಿದಾದ್ದರಿಂದ ಸಂಕ್ಷೇಪವಾಗಿ ನಚಿಕೇತನಿಗೆ ಉತ್ತರವನ್ನು ನೀಡುತ್ತಿದ್ದಾರೆ ಯಮದೇವರು. ನೀನು ಕೇಳಿದ ಭಗವಂತನ ಸ್ವರೂಪವು ಈ ರೀತಿಯಾಗಿದೆ ಎಂದು ಉತ್ತರಿಸುತ್ತಿದ್ದಾರೆ. ॥೨.೧.೩॥

**ವಾದಿರಾಜೀಯವಿಶೇಷ-** ಸಂಸಾರದಲ್ಲಿ ಸಕಲಜೀವರಾಶಿಗಳಿಗೆ ಪ್ರವರ್ತಕನಾಗಿರುವ ಪರಮಾತ್ಮ ಮುಕ್ತಿಯಲ್ಲಿಯೂ ಎಲ್ಲರಿಗೆ ನಿಯಾಮಕನಾಗಿಯೇ ಇರುತ್ತಾನೆ. ಸಂಸಾರದಲ್ಲಿ ತನಗೆ ನಿಯಮ್ಯನಾಗಿ ಇರುವ ಜೀವನನ್ನು ಮುಕ್ತಿಯಲ್ಲಿ ಸ್ವತಂತ್ರನಾಗುವಂತೆ ಯಾವ ಪ್ರೇಕ್ಷಾವಂತ ಮಾಡುತ್ತಾನೆ ? ಯಾರೂ ಮಾಡಲಾರರು. ಆದ್ದರಿಂದ ಮುಕ್ತರಿಗೂ ಭಗವಂತ ನಿಯಾಮಕನಾಗಿದ್ದಾನೆ ಎಂದು ತಿಳಿಯಬೇಕು.

ಈ ವಿಷಯಕ್ಕೆ ಸಂವಾದಿಯಾಗಿ ಅನೇಕ ಶ್ರುತಿಗಳಿವೆ. ''ಉತಾಮೃತತ್ತ್ವಸ್ಯೇಶಾನೋ ಯದನ್ನೇನಾಽತಿರೋಹತಿ'' ಯಾವ ಕಾರಣ ಪರಮಾತ್ಮ ಅನ್ನೋಪಜೀವಿಯಾದ ಮರ್ತ್ಯರನ್ನು ಅತಿಕ್ರಮಿಸಿ ಇರುತ್ತಾನೋ ಆ ಕಾರಣ ಮುಕ್ತಸಮೂಹಕ್ಕೂ ಪರಮಾತ್ಮ ನಿಯಾಮಕನಾಗಿಯೇ ಇರುತ್ತಾನೆ. ಸಂಸಾರದಲ್ಲಿ ಜೀವರಿಗೆ ನಿಯಾಮಕನಾಗಿದ್ದವನು ಮುಕ್ತಿಯಲ್ಲಿಯೂ ಅವರಿಗೆ ನಿಯಾಮಕನಾಗಿಯೇ ಇರುತ್ತಾನೆ. ವಿವೇಕಿಯಾಗಿರುವ ಯಾವ ರಾಜನೂ ತನ್ನ ಸೇವಕನನ್ನು ಎಂದಿಗೂ ತನಗೆ ಸಮಾನನಾಗುವಂತೆ ಮಾಡುವದಿಲ್ಲ. ಹಾಗೆ ಸಂಸಾರದಲ್ಲಿ ಸಕಲರಿಗೂ ಸ್ವಾಮಿಯಾಗಿರುವ ಪರಮಾತ್ಮ ಮುಕ್ತಿಯಲ್ಲಿ ತನ್ನ ಸ್ವಾಮ್ಯವನ್ನು ಹೇಗೆ ಪರಿತ್ಯಜಿಸಲು ಸಾಧ್ಯ.

ಸಂಸಾರಿಗೆ ನಿಯಾಮಕನಾಗಿರುವವನು ಮುಕ್ತನಿಗೆ ನಿಯಾಮಕನಾಗಿರುವದಿಲ್ಲ ಎಂಬ ಮಾತು ಶಾಸ್ತ್ರವಿರುದ್ಧವಾಗಿದೆ. ಲೋಕವಿರೋಧವೂ ಈ ಮಾತಿಗೆ ಬರುತ್ತದೆ. ಲೋಕಶಾಸ್ತ್ರ-ವಿರುದ್ಧವಾದದ್ದು ಎಂದಿಗೂ ಪ್ರಮೇಯವಾಗಲು ಸಾಧ್ಯವಿಲ್ಲ.

**ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥೨.೧.೪॥**

ಜೀವನು ಸ್ವಪ್ನಾವಸ್ಥೆಯಲ್ಲಿಯ ಶ್ರೀಹರಿಯ ವ್ಯಾಪಾರವನ್ನು ಮತ್ತು ಜಾಗರಾವಸ್ಥೆಯಲ್ಲಿಯ ವ್ಯಾಪಾರಗಳನ್ನು ತಿಳಿದುಕೊಳ್ಳಬೇಕು. ಪರಮಮಹತ್ತಾದ, ಸರ್ವತ್ರ ವ್ಯಾಪ್ತನಾದ, ಸರ್ವಸ್ವಾಮಿಯಾದ ಆ ಪರಮಾತ್ಮನನ್ನು ತಿಳಿದು ಮನನ ಮಾಡಬೇಕು. ಹೀಗೆ ಮಾಡಿದಮೇಲೆ ತನ್ನ ರಕ್ಷಣೆಗಾಗಿ ಜೀವನು ಹಾತೊರೆಯವುದಿಲ್ಲ. ಸ್ವತಂತ್ರನಾದ ಭಗವಂತನ ಇಚ್ಛೆಯಿಂದಲೇ ನನ್ನ ರಕ್ಷಣೆಯಾಗುತ್ತದೆಂದು ತಿಳಿದುಕೊಂಡಿರುತ್ತಾನೆ. ಮತ್ತು ತಾನಾಗಿಯೇ ಮಾಡಿಕೊಳ್ಳುವ ತನ್ನ ರಕ್ಷಣೆಯ ಪ್ರಯತ್ನವಿದು ವ್ಯರ್ಥವೆಂದು ತಿಳಿದು ತನ್ನ ರಕ್ಷಣೆಯ ವಿಷಯದಲ್ಲಿ ಉದಾಸೀನನಾಗುತ್ತಾನೆ. ಸ್ವಪ್ನ-ಜಾಗ್ರದಾದ್ಯವಸ್ಥಾಗಳಲ್ಲಿ ಜೀವನಿಗೆ ಪ್ರೇರಕನಾಗಿರುವ, ಜೀವರ ಹೃದಯಗುಹಾದಲ್ಲಿ ವಾಸವಾಗಿದ್ದುಕೊಂಡು ಸುಖಸಾರವನ್ನೇ ಭೋಗಮಾಡುವ, ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ, ಸಕಲಕ್ಕೂ ಸ್ವಾಮಿಯಾಗಿರುವ, ವ್ಯಾಪ್ತನಾಗಿರುವ, ಸರ್ವೋತ್ತಮವಾದ ವಸ್ತು ಯಾವುದಿದೆಯೋ ಅದು ಮುಕ್ತನಿಯಾಮಕತಯಾ ಮುಕ್ತಿಯಲ್ಲಿಯೂ ಇರುತ್ತದೆ. ಜೀವನಿಯಾಮಕತಯಾ ಜೀವರ ಹೃದಯದಲ್ಲಿರುವ ಪರಮಾತ್ಮ ಅದೇ ಜೀವನಿಗೆ ಮುಕ್ತಿಯಾಗಿರುವಾಗ ಅವನ ಹೃದಯವನ್ನು ಪರಿತ್ಯಜಿಸಿ ಹೇಗೆ ಇರಲು ಸಾಧ್ಯ. ಮುಕ್ತ್ಯವಸ್ಥೆಯಲ್ಲಿಯೂ ಅಸ್ವತಂತ್ರನಾಗಿರುವ ಜೀವನು ತನ್ನ ಅಭೀಷ್ಟವಾದ ಮುಕ್ತಿಯನ್ನು ನೀಡಿದ, ಸ್ವತಂತ್ರನಾದ, ತನ್ನ ಹೃದಯದಲ್ಲಿರುವ ಭಗವಂತನನ್ನು ಹೊರಗೆ ಹಾಕಲು ಹೇಗೆ ಇಚ್ಛಿಸುತ್ತಾನೆ. ಭಗವಂತ ಮುಕ್ತನಿಯಾಮಕನಾಗಿರುವದಿಲ್ಲವೆಂಬ ಮಾತು ಅನೇಕ ಯುಕ್ತಿಗಳಿಂದ ವಿರುದ್ಧವಾಗಿದೆಯಾದ್ದರಿಂದ ಆ ತತ್ತ್ವವನ್ನು ಸರ್ವಥಾ ನಂಬಬಾರದು. ವಿಭುವಾದ ಅರ್ಥಾತ್ ಸರ್ವತ್ರ ವ್ಯಾಪ್ತನಾದ ಭಗವಂತ ಜೀವರ ಹೃದಯದಲ್ಲಿ ಇರುವದಿಲ್ಲ ಎಂದು ಹೇಳುವದು ಸರಿಯಲ್ಲ.

**ಯ ಇದಂ ಮಧ್ವದಂ ವೇದಾತ್ಮಾನಂ ಜೀವಮಂತಿಕಾತ್ ।**
**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ । ಏತದ್ ವೈ ತತ್ ॥**

ನಿತ್ಯವೂ, ಶಾಶ್ವತವಾದ ಆನಂದವನ್ನು ಅನುಭವಿಸುವವನು ಶ್ರೀಹರಿ ಎಂದು ತಿಳಿಯಬೇಕು. ಜೀವರಿಗೆ ನಿಯಾಮಕನಾಗಿ, ಜೀವರ ಸಮೀಪದಲ್ಲಿ ಅರ್ಥಾತ್ ಜೀವರ ಹೃದಯಗುಹಾದಲ್ಲಿ ಭಗವಂತ ಇದ್ದಾನೆಂದು ತಿಳಿಯಬೇಕು. ಭೂತ-ಭಾವಿ-ವರ್ತಮಾನ ಜಗತ್ತಿಗೆ ಪ್ರೇರಕನಾದವನು ಸ್ವಾಮಿಯಾದವನು ಪರಮಾತ್ಮ ಎಂದು ತಿಳಿಯಬೇಕು. ಹೀಗೆ ತಿಳಿದವನು ತನ್ನ ರಕ್ಷಣಕ್ಕಾಗಿ ಯಾವುದೇ ತರಹದ ಪ್ರಯತ್ನವನ್ನು ಮಾಡುವುದಿಲ್ಲ. ಭಗವಂತನ ಜ್ಞಾನವನ್ನು ಪಡೆದುದರಿಂದ ಅವನಿಗೆ ಯಾವ ಭಯಗಳೂ ಇರುವುದಿಲ್ಲ. ಭಯಗಳು ಬಂದಾಗಲೂ ಭಗವಂತನ ಇಚ್ಛೆಯಿಂದಲೇ ಅವರ ರಕ್ಷಣೆಯಾಗುತ್ತದೆ. ಇಂತಹ ಭಗವಂತ ಮುಕ್ತರಿಗೂ ನಿಯಾಮಕನಾಗಿರುವನು. ನೀನು ಕೇಳಿದ ಮುಕ್ತನಿಯಾಮಕವಾದ ಭಗವತ್ಸ್ವರೂಪವು ಇದೇ ಆಗಿದೆ.

ಈ ಮಂತ್ರ ಜೀವ-ಪರಮಾತ್ಮರಿಗೆ ಅಭೇದವನ್ನು ಪ್ರತಿಪಾದಿಸುತ್ತದೆ ಎಂದು ತಿಳಿಯಬಾರದು. ಅಭಿನ್ನರಾದವರಲ್ಲಿ ''ಹತ್ತಿರ'' ''ದೂರ'' ಎಂಬುದು ಇರುವುದೇ ಇಲ್ಲ. ಹೀಗಾಗಿ ತನಗೆ ತಾನು ಹತ್ತಿರ ತನಗೆ ತಾನು ದೂರ ಎಂದು ವ್ಯವಹರಿಸಲು ಸಾಧ್ಯವಿಲ್ಲ. ಆದ್ದರಿಂದ ಜೀವರ ಹತ್ತಿರದಲ್ಲಿ ಪರಮಾತ್ಮ ಇದ್ದಾನೆ ಎಂದು ತಿಳಿದುಕೊಳ್ಳಬೇಕು. ಹೊರತು ಜೀವೈಕ್ಯವನ್ನಲ್ಲ.

**ಯಃ ಪೂರ್ವಂ ತಪಸೋ ಜಾತಂ ಅದ್ಭ್ಯಃ ಪೂರ್ವಮಜಾಯತ ।**
**ಗುಹಾಂ ಪ್ರವಿಶ್ಯ ತಿಷ್ಠಂತಂ ಯೋ ಭೂತೇಭಿರ್ವ್ಯಪಶ್ಯತ । ಏತದ್ ವೈ ತತ್ ॥**

ಭೂತ-ಭಾವಿ-ವರ್ತಮಾನಕ್ಕೆ ದೊರೆಯಾದ ಪರಮಾತ್ಮನು ಬ್ರಹ್ಮಾದಿದೇವತೆಗಳನ್ನು ಸೃಷ್ಟಿಮಾಡಿದ ವಿಚಾರವನ್ನು ಈ ಮಂತ್ರ ತಿಳಿಸುತ್ತದೆ.

ಹತ್ತು ಕಲ್ಪದ ವರೆಗೆ ಲವಣಸಮುದ್ರದಲ್ಲಿ ತಪಸ್ಸು ಮಾಡಿದ್ದರಿಂದಾಗಿ ಮತ್ತು ದಿಗಂಬರತ್ವ-ಜಟಿಲತ್ವಾದಿಗಳಿಂದ ತಪಃಪ್ರವರ್ತಕರಾದದ್ದರಿಂದ ತಪೋನಾಮಕರಾಗಿದ್ದಾರೆ ರುದ್ರದೇವರು. ಅಹಂಕಾರತತ್ತ್ವಕ್ಕೆ ಅಭಿಮಾನಿಗಳಾದ ಈ ರುದ್ರದೇವರಿಗಿಂತಲೂ ಪೂರ್ವದಲ್ಲಿ ಮತ್ತು ಅಪ್ ಮೊದಲಾದ ಪಂಚಮಹಾಭೂತಗಳಿಗೆ ಅಭಿಮಾನಿಗಳಾದ ದೇವತೆಗಳಿಗಿಂತಲೂ ಪೂರ್ವದಲ್ಲಿ, ಭಗವಂತನಿಂದ ಹೊರತು ಬೇರಾರಿಂದಲೂ ಜನಿಸದಿರುವ ಬ್ರಹ್ಮದೇವರನ್ನು ಪರಮಾತ್ಮ ಸೃಷ್ಟಿಸಿದ್ದಾನೆ. ಇಂತಹ ಪರಮಾತ್ಮ ಎಲ್ಲರ ಹೃದಯಗುಹಾದಲ್ಲಿ ವಾಸವಾಗಿರುತ್ತಾನೆ. ಹೃದಯಗುಹಾವಾಸಿಯಾದ ತನ್ನ ಈ ರೂಪವನ್ನು ಭೂತಾಭಿಮಾನಿದೇವತೆಗಳಿಂದ ಸಹಿತನಾಗಿ ಪರಮಾತ್ಮ ನೊಡುತ್ತಾನೆ. ಈ ಪರಮಾತ್ಮನೇ ಮುಕ್ತನಿಯಾಮಕನಾಗಿರುವನೆಂದು ತಿಳಿದುಕೊ. ॥೨.೧.೬॥

**ವೇದೇಶೀಯವಿಶೇಷ-** ಅಪ್ ಎಂದರೆ ಜಲತತ್ತ್ವ ಎಂದು ಅರ್ಥ. ಆದರೆ ಪ್ರಕೃತ ಈ ಶಬ್ದಕ್ಕೆ ಪಂಚಮಹಾಭೂತಗಳು ಎಂದು ಅರ್ಥವನ್ನು ಹೇಳುತ್ತಿದ್ದೀರಿ. ಇದು ಸಮಂಜಸವೇ ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಹೀಗೆ ಉತ್ತರವನ್ನು ತಿಳಿಯಬೇಕು. ಪಂಚೀಕರಣಪಕ್ಷದಲ್ಲಿ ಪ್ರತಿಯೊಂದು ಭೂತವೂ ಸರ್ವಭೂತಾತ್ಮಕವಾಗಿರುತ್ತದೆ. ಆದ್ದರಿಂದ ಅಪ್‌ತತ್ತ್ವವೂ ಸರ್ವಭೂತಾತ್ಮಕವಾಗಿದೆ. ಆದ್ದರಿಂದ ಅಪ್ ಎಂಬ ಶಬ್ದವು ಸರ್ವಭೂತವಾಚಕವಾಗಿದೆ ಎಂದು ಹೇಳಿದರೆ ಯಾವ ಸಮಸ್ಯೆಯೂ ಬರುವದಿಲ್ಲ.

ಬ್ರಹ್ಮದೇವರು ಜಲತತ್ತ್ವಕ್ಕಿಂತಲೂ ಪೂರ್ವದಲ್ಲಿ ಹುಟ್ಟಿದ್ದಾರೆ ಎಂದು ಹೇಳಿದರೆ ''ಅದ್ಭ್ಯಃ ಸಂಭೂತೋ ಹಿರಣ್ಯಗರ್ಭಃ'' ಎಂಬ ಶ್ರುತಿವಚನದ ವಿರೋಧವು ಪ್ರಾಪ್ತವಾಗುತ್ತದೆ ಎಂದು ಶಂಕಿಸಬಾರದು. ಆ ವಾಕ್ಯವು ಬ್ರಹ್ಮಾಂಡದ ಒಳಗಿನ ಸೃಷ್ಟಿಯನ್ನು ಹೇಳುವ ವಾಕ್ಯ. ಕಾಠಕದ ಈ ವಚನವು ಬಾಹ್ಯಸೃಷ್ಟಿವಿಷಯಕವಾಗಿದೆ. ಅರ್ಥಾತ್ ಬ್ರಹ್ಮಾಂಡದ ಹೊರಗೆ

ಬ್ರಹ್ಮದೇವರು ಹುಟ್ಟುವಾಗ ಪಂಚಮಹಾಭೂತಗಳಿಗಿಂತಲೂ ಮೊದಲು ಜನಿಸಿದ್ದಾರೆ. ಬ್ರಹ್ಮಾಂಡದ ಒಳಗೆ ಬ್ರಹ್ಮದೇವರ ಸೃಷ್ಟಿಯಾಗಿದೆ. ಅದು ಪಂಚಮಹಾಭೂತಗಳ ಸೃಷ್ಟಿಯಾದ ನಂತರ ಆಗಿದೆ. ಈ ವಿಶೇಷವನ್ನು ತಿಳಿದು ವಿರೋಧವನ್ನು ಪರಿಹರಿಸಿಕೊಳ್ಳಬೇಕು.

**ಯಾ ಪ್ರಾಣೇನ ಸಂವಿಶತ್ಯದಿತಿರ್ದೇವತಾಮಯೀ ।**
**ಗುಹಾಂ ಪ್ರವಿಶ್ಯ ತಿಷ್ಠಂತೀಂ ಯಾ ಭೂತೇಭಿರ್ವ್ಯಜಾಯತ । ಏತದ್ ವೈ ತತ್ ॥**

ಅದಿತಿ ಅರ್ಥಾತ್ ಕಶ್ಯಪರ ಹೆಂಡತಿ. ದೇವತೆಗಳ ತಾಯಿಯಾದವಳು ಎಂದು ಅರ್ಥ. ಹೀಗೆ ಹಲವರು ಅರ್ಥವನ್ನು ಹೇಳುತ್ತಾರೆ. ಸ್ತ್ರೀಲಿಂಗ ಮತ್ತು ಲೋಕಪ್ರಸಿದ್ಧಿ ಈ ಅರ್ಥಕ್ಕೆ ಗಮಕವಾಗಿದೆ. ಆದರೆ ಈ ಅರ್ಥ ಮುಂದಿನ ವಚನದಿಂದ ಬಾಧಿತವಾಗುತ್ತದೆ. ಈ ಅದಿತಿಗೆ ಮುಂದಿನ ಪಾದದಲ್ಲಿ ಹೇಳುವ ''ಜೀವಗುಹಾಪ್ರವೇಶ'' ಸರ್ವಥಾ ಇರುವುದಿಲ್ಲ. ಆದ್ದರಿಂದ ರೂಢ್ಯರ್ಥವನ್ನು ಪರಿತ್ಯಜಿಸಿ ಯೌಗಿಕವಾದ ಅರ್ಥವನ್ನು ಸ್ವೀಕರಿಸಬೇಕು. ಆದ್ದರಿಂದ ಸ್ತ್ರೀಲಿಂಗವು ನಾವು ಮಾಡುವ ಅರ್ಥಕ್ಕೆ ಬಾಧಕವಾಗುವುದಿಲ್ಲ.

ಅದಿತಿ ''ಅದನಾತ್'' ಚರಾಚರಪ್ರಪಂಚವನ್ನು ಸಂಹಾರಮಾಡುತ್ತಾನೆ ಆದ್ದರಿಂದ ಪರಮಾತ್ಮ ಅದಿತಿನಾಮಕನಾಗಿದ್ದಾನೆ. ಈ ಭಗವಂತನಿಗೆ ಸಕಲರೂಪಗಳೂ ಇದ್ದಂತೆ ಸ್ತ್ರೀರೂಪವೂ ಇದೆ. ಈ ಅದಿತಿನಾಮಕನಾದ ಭಗವಂತನು ಪ್ರಾಣದೇವರ ಜೊತೆಗೆ ಜೀವರ ಶರೀರಗಳಲ್ಲಿ ಇರುತ್ತಾನೆ. ಪ್ರಾಣಸಹಿತನಾಗಿ ಸರ್ವಸಂಹಾರಕನಾಗಿರುವ ಪರಮಾತ್ಮ ಎಲ್ಲರ ಶರೀರದಲ್ಲಿ ವಾಸವಾಗಿ ಇರುತ್ತಾನೆ. ದೇವತಾಮಯಿಯಾಗಿದ್ದಾನೆ. ಅಂದರೆ ದೇವತಾ-ಸ್ವರೂಪವಾಗಿದ್ದಾನೆ ಎಂದು ಅರ್ಥವಲ್ಲ. ಕಿಂತು ಮಯಟ್ ಪ್ರತ್ಯಯಕ್ಕೆ ತಾದಾತ್ಮ್ಯ ಎಂದು ಅರ್ಥವಿದ್ದಂತೆ ಪ್ರಾಧಾನ್ಯವೆಂಬ ಅರ್ಥವೂ ಇರುತ್ತದೆ. ಆದ್ದರಿಂದ ಸರ್ವದೇವೋತ್ತಮ-ನಾದವನು ಎಂಬ ಅರ್ಥವನ್ನು ತಿಳಿಯಬೇಕು. ಹೃದಯಗುಹಾವಾಸಿಯಾಗಿರುವ ಆ ಪರಮಾತ್ಮ ತಾನು ದೇಹದ ಸಂಯೋಜನೆಯನ್ನು ಮಾಡಿ ಬ್ರಹ್ಮಾದಿಗಳನ್ನು ಮಾತ್ರ ಸೃಷ್ಟಿಮಾಡುವದಿಲ್ಲ. ಕಿಂತು ಮತ್ಸ್ಯ-ಕೂರ್ಮಾದಿರೂಪಗಳಿಂದ ತನ್ನನ್ನು ತಾನೇ ಸೃಷ್ಟಿಮಾಡಿಕೊಳ್ಳುತ್ತಾನೆ. ಇದುವೆ ನೀನು ಕೇಳಿದ ಮುಕ್ತನಿಯಾಮಕವಾದ ಭಗವಂತನ ಸ್ವರೂಪವೆಂದು ತಿಳಿದುಕೊ. ॥೨.೧.೭॥

ಅರಣ್ಯೋರ್ನಿಹಿತೋ ಜಾತವೇದಾ
ಗರ್ಭ ಇವ ಸುಭೃತೋ ಗರ್ಭಿಣೀಭಿಃ ।
ದಿವೇ ದಿವ ಈಡ್ಯೋ ಜಾಗೃವದ್ಭಿಃ
ಹವಿಷ್ಮದ್ಭಿಃ ಮನುಷ್ಯೇಭಿರಗ್ನಿಃ ॥೨.೧.೮ ॥

ಈ ಮಂತ್ರವನ್ನು ತಿಳಿಯುವಾಗ "ಅರಣ್ಯೋಃ ನಿಹಿತಃ" "ಜಾತವೇದಾಃ" ಎಂಬ ಪದಗಳಿಂದ ಪ್ರಸಿದ್ಧಾಗ್ನಿಯೇ ಇಲ್ಲಿ ಪ್ರತಿಪಾದಿತವಾಗಿದೆ ಎಂದು ತೋರುತ್ತದೆ. ಇದನ್ನು ಶ್ರೀಮದಾಚಾರ್ಯರ ವ್ಯಾಖ್ಯಾನದಿಂದ ಯಥಾರ್ಥವಾಗಿ ತಿಳಿದುಕೊಳ್ಳಬೇಕು.

ಅರಣಿ ಎಂದರೆ ಗುರುಶಿಷ್ಯರು. "ಣ" ಎಂದರೆ ಸುಖ. ಸುಖರೂಪಿಯಾದ ಪರಮಾತ್ಮ ಅವನ "ಅರ" ಎಂದರೆ ಜ್ಞಾನ ಎಂದು ಅರ್ಥ. ಈ ಜ್ಞಾನ ಗುರುಶಿಷ್ಯರಿಗೆ ಮಾತ್ರ ಆಗುತ್ತದೆ. ಸುಖರೂಪಿಯಾದ ಪರಮಾತ್ಮ ಗುರುಶಿಷ್ಯರಿಂದ ಮಾತ್ರ ತಿಳಿಯಲ್ಪಡುತ್ತಾನೆ. ಆದ್ದರಿಂದ ಅರಣಿಶಬ್ದವಾಚ್ಯರಾಗಿದ್ದಾರೆ ಗುರುಶಿಷ್ಯರು. ಈ ಅರಣಿನಾಮಕರಾದ ಗುರುಶಿಷ್ಯರಲ್ಲಿ ಸೂಕ್ಷ್ಮರೂಪೇಣ ನಿತ್ಯವೂ ಪರಮಾತ್ಮ ಸನ್ನಿಹಿತನಾಗಿರುತ್ತಾನೆ. ಗರ್ಭಿಣಿಯರು ಶಿಶುವನ್ನು ಹೇಗೆ ಚೆನ್ನಾಗಿ ಧರಿಸಿರುತ್ತಾರೋ ಹಾಗೆ ಗುರುಶಿಷ್ಯರು ಪರಮಾತ್ಮನನ್ನು ತಮ್ಮ ಮನಸ್ಸಿನಲ್ಲಿ ಧರಿಸಿರುತ್ತಾರೆ. ಅರಣಿಗಳನ್ನು ಮಥನ ಮಾಡಿದಾಗ ಹೇಗೆ ಅಗ್ನಿಯ ಉದ್ಭವವಾಗುತ್ತದೋ ಹಾಗೆ ಗುರುಶಿಷ್ಯರು ಜಿಜ್ಞಾಸಾನಂತರ ಮಾಡಿದ ಧ್ಯಾನದಿಂದ ಭಗವಂತ ಪ್ರಾದುರ್ಭೂತ-ನಾಗುತ್ತಾನೆ.

ನಿತ್ಯವೂ ಮನನಾದಿಶೀಲರಾದುದರಿಂದ "ಮನುಷ್ಯ" ಎಂದರೆ ದೇವತೆಗಳು ಎಂದು ಅರ್ಥ. ಇವರು ಯಾವಾಗಲೂ ಜಾಗರದಿಂದ, ಎಚ್ಚರಿಕೆಯಿಂದ ಇರುತ್ತಾರೆ. ಕಣ್ಣುಗಳನ್ನು ತೆರೆಯುವದು ಜಾಗರವಲ್ಲ, ಕಿಂತು ಜ್ಞಾನವನ್ನು ಪಡೆಯುವದೆ ನಿಜವಾದ ಜಾಗರವಾಗಿದೆ. ಆದ್ದರಿಂದ ಸದಾ ಜ್ಞಾನವಿದ್ದವರು ದೇವತೆಗಳು ಮಾತ್ರ. ಇಂತಹ ಜ್ಞಾನನಿಷ್ಠರಾದ ದೇವತೆಗಳಿಂದ ಸ್ತುತ್ಯನಾಗಿದ್ದಾನೆ ಪರಮಾತ್ಮ. ಇನ್ನು ಮುಕ್ತಿಯೋಗ್ಯರಾದ ಮನುಷ್ಯರು ಯಾಗಯೋಗ್ಯವಾದ ದ್ರವ್ಯಗಳನ್ನು ಸಂಪಾದಿಸಿ ಯಜ್ಞಾದಿಕರ್ಮಗಳಿಂದ ನಿತ್ಯವೂ ಪರಮಾತ್ಮನ ಆರಾಧನೆಯನ್ನು ಮಾಡುತ್ತಾರೆ. ಈ ಪರಮಾತ್ಮನೇ ಮುಕ್ತನಿಯಾಮಕನಾಗಿದ್ದಾನೆ.

**ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ।**
**ತಂ ದೇವಾಸ್ಸರ್ವೇ ಅರ್ಪಿತಾಸ್ತದು ನಾತ್ಯೇತಿ ಕಶ್ಚನ । ಏತದ್ ವೈ ತತ್ ॥**

ಜ್ಞಾನದಿಂದ, ಯಜ್ಞಾದಿಗಳಿಂದ ಶ್ರೀಹರಿಯನ್ನು ಆರಾಧಿಸುವವರಿಗೆ ಶ್ರೀಹರಿಯೇ ಆಶ್ರಯನಾಗಿದ್ದಾನೆ ಎಂಬುದನ್ನು ಈ ಮಂತ್ರ ತಿಳಿಸುತ್ತದೆ.

ಮೂಲಾಶ್ರಯನಾದ ಭಗವಂತನಿಂದಲೇ ಸೃಷ್ಟಿಕಾಲದಲ್ಲಿ ಸೂರ್ಯನು ಉದಯಿಸುತ್ತಾನೆ. ಪ್ರಲಯಕಾಲದಲ್ಲಿ ಮತ್ತೆ ಆ ಪರಮಾತ್ಮನಲ್ಲಿಯೇ ಲೀನವಾಗುತ್ತಾನೆ. ಇಂತಹ ಪರಮಾತ್ಮನನ್ನು ಸಕಲದೇವತೆಗಳೂ ಆಶ್ರಯಿಸಿಕೊಂಡು ಇದ್ದಾರೆ. ಹೀಗೆ ಸಕಲದೇವತೆಗಳಿಗೆ ಆಶ್ರಯನಾಗಿರುವ ಪರಮಾತ್ಮನನ್ನು ಗುಣತಃ ಸ್ವರೂಪತಃ ಅತಿಕ್ರಮಿಸಲು ಯಾರಿಗೂ ಸಾಧ್ಯವಿಲ್ಲ, ಅವನಿಗೆ ಸಮನಾದವನು ಮತ್ತಾರೂ ಇಲ್ಲ. ಇದುವೇ ನೀನು ಕೇಳಿದ ಮುಕ್ತನಿಯಾಮಕನಾದ ಪರಮಾತ್ಮನ ಸ್ವರೂಪವಾಗಿದೆ.

**ಯದೇವೇಹ ತದಮುತ್ರ ಯದಮುತ್ರ ತದನ್ವಿಹ ।**
**ಮೃತ್ಯೋಃಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥೨.೧.೧೦॥**

ಈ ಶರೀರದಲ್ಲಿ ಯಾವ ಚೈತನ್ಯವಿದೆಯೋ ಅದೇ ಚೈತನ್ಯ ಮತ್ತೊಂದು ಶರೀರದಲ್ಲಿ ಎಲ್ಲ ಶರೀರಗಳಲ್ಲಿಯೂ ಇದೆ. ಅರ್ಥಾತ್ ಎಲ್ಲವೂ ಒಂದೇ ಎಂಬ ಅರ್ಥವನ್ನು ಅದ್ವೈತಿಗಳು ಹೇಳುತ್ತಾರೆ. ಹೀಗಲ್ಲದೆ ಈ ಮಂತ್ರದ ಅರ್ಥವನ್ನು ಈ ರೀತಿಯಾಗಿ ತಿಳಿಯಬೇಕು.

ಪರಮಾತ್ಮನ ರಾಮ-ಕೃಷ್ಣಾದಿಪ್ರಾದುರ್ಭಾವರೂಪಗಳೆನಿವೆಯೋ ಅವು ಕ್ಷೀರ-ಸಮುದ್ರಾದಿಗತಮೂಲರೂಪದಿಂದ ಅಭಿನ್ನವಾಗಿವೆ. ಯಾವುದು ಮೂಲರೂಪವೋ ಅದುವೇ ಪ್ರಾದುರ್ಭಾವದ ರೂಪವಾಗಿದೆ. ಪ್ರಾದುರ್ಭಾವದ ರೂಪದಲ್ಲಿ ಮೂಲರೂಪದಲ್ಲಿ ಯಾವ ರೀತಿಯ ವ್ಯತ್ಯಾಸವಿರುವದಿಲ್ಲ. ಅಣುವಿನಷ್ಟೂ ಭೇದವಿಲ್ಲ. ಹೀಗೆ ಅನಂತವಾದ ಯಾವ ಭಗವದ್ರೂಪಗಳಲ್ಲಿಯೂ ಯಾವುದೇ ತರಹದ ಭೇದವಿರುವದಿಲ್ಲ. ಸಕಲರ ದೇಹದಲ್ಲಿ, ಎಲ್ಲ ಪದಾರ್ಥಗಳಲ್ಲಿ ವಾಸವಾಗಿರುವ ಪರಮಾತ್ಮನಲ್ಲಿಯೂ ಯಾವುದೇ ತರಹದ ಭೇದವಿರುವದಿಲ್ಲ. ಭಗವಂತನ ಅವಯವಗಳಿಗೆ ಅವನ ಗುಣಗಳಿಗೆ ಮತ್ತು ಕ್ರಿಯೆಗಳಿಗೆ ಪರಸ್ಪರ ಭೇದವನ್ನು ಎಣಿಸಬಾರದು. ಭೇದವನ್ನು ಮಾತ್ರವಲ್ಲ, ಭೇದಾಭೇದವನ್ನೂ ತಿಳಿಯಬಾರದು. ಅಣುವಿನಷ್ಟಾದರೂ ಭೇದವನ್ನು, ಭೇದಾಭೇದವನ್ನು ಯಾರು ತಿಳಿಯುತ್ತಾರೆಯೋ ಅವರಿಗೆ ತಮಸ್ಸು ಆಗುತ್ತದೆ. ಈ ವಿಷಯದಲ್ಲಿ ಸಂದೇಹ ಸರ್ವಥಾ ಇಲ್ಲ. ಇದನ್ನು ಇಲ್ಲಿ ತಿಳಿಯಬೇಕು. ॥೨.೧.೧೦॥

**ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃಸ್ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥೨.೧.೧೧॥**

ಪರಮಾತ್ಮನ ಕರ-ಚರಣಾದ್ಯವಯವಗಳಿಗೂ ಭೇದವಿಲ್ಲ. ಮನಸಾ ವೇದಾರ್ಥವನ್ನು ವಿಚಾರಿಸಿ ಗಹನವಾದ ಈ ವಿಷಯವನ್ನು ತಿಳಿದುಕೊಳ್ಳಬೇಕು. ದೃಶ್ಯಮಾನವಾದ ಭೇದವ್ಯವಹಾರವನ್ನು ಕಂಡು ಈ ಪ್ರಮೇಯವನ್ನು ಅಪಲಾಪ ಮಾಡಬಾರದು. ಪರಮಾತ್ಮನು ಅತಿಸೂಕ್ಷ್ಮನಾಗಿದ್ದಾನೆ. ಅವ್ಯಕ್ತಸ್ವಭಾವದವನು. ಅವನ ವಿಚಾರಗಳನ್ನು ತಿಳಿಯುವಾಗ ನಮ್ಮ ಬುದ್ಧಿಯು ಅನುಪಯುಕ್ತವಾಗುತ್ತದೆ. ರಹಸ್ಯವಾದ ಈ ಪ್ರಮೇಯವನ್ನು ಸಾಧಕನಾದವನು ತನ್ನ ಮನಸ್ಸಿನಲ್ಲಿಯೇ ಇಟ್ಟುಕೊಳ್ಳಬೇಕು. ಯೋಗ್ಯರಿಗೆ ಮಾತ್ರ ಉಪದೇಶ ಮಾಡಲೇಬೇಕು. ಅಯೋಗ್ಯರಾದವರಿಗೆ ಸರ್ವಥಾ ಉಪದೇಶಿಸಬಾರದು. ಶ್ರವಣಾದಿಗಳಿಂದ ಸಂಸ್ಕೃತವಾದ ಮನಸ್ಸಿನಿಂದ ಪರಮಾತ್ಮನ ವಿಚಾರವನ್ನು ಮಾಡಬೇಕು. ಈ ವಿಷಯಗಳನ್ನು ಮನನಸಾಮರ್ಥ್ಯದಿಂದ ತಿಳಿದುಕೊಳ್ಳಬೇಕು.

ಪರಮಾತ್ಮನ ಅವಯವ-ಗುಣ-ಕ್ರಿಯಾ ಮೊದಲಾದವುಗಳಿಗೆ ಪರಮಾತ್ಮನಿಗೆ ಯಾವುದೆ ರೀತಿಯಾದ ಭೇದವಿರುವದಿಲ್ಲ. ಘಟದ ಅವಯವಕ್ಕೂ ಘಟಕ್ಕೂ ಭೇದಾಭೇದವಿದ್ದಂತೆ ಪ್ರಕೃತ ಭಗವಂತನ ವಿಷಯದಲ್ಲಿ ಹೇಳಬಾರದು. ಪರಮಾತ್ಮನಿಗೂ ಪರಮಾತ್ಮನ ಗುಣಕ್ರಿಯಾದಿಗಳಿಗೂ ಭೇದವನ್ನು ಚಿಂತಿಸುವವರು ಕೂಡಾ ತಮಸ್ಸನ್ನು ಹೊಂದುತ್ತಾರೆ. ಇದು ಶ್ರುತಿ ತಿಳಿಸಿದ ವಿಷಯವಾಗಿದೆ.

ಭಗವಂತನ ರೂಪಾಂತರಗಳಲ್ಲಿ ಭೇದಾಭೇದವನ್ನು ತಿಳಿದವರಿಗೆ ಹೇಗೆ ತಮಸ್ಸಾಗುತ್ತದೋ ಹಾಗೆ ಭಗವಂತನ ಅವಯವ-ಗುಣ-ಕ್ರಿಯಾದಿಗಳಿಗೆ ಭಗವಂತನಿಗೆ ಪರಸ್ಪರ ಭೇದಾಭೇದವನ್ನು ತಿಳಿದವನೂ ತಮಸ್ಸನ್ನು ಹೊಂದುತ್ತಾನೆ. ಈ ವಿಷಯವನ್ನು ''ಇವ'' ಎಂಬ ಶಬ್ದವು ತಿಳಿಸಿಕೊಡುತ್ತದೆ.

ಭೇದಾಭೇದವನ್ನು ತಿಳಿದವನಿಗಿಂತಲೂ ಅಧಿಕವಾದ ಅನರ್ಥವಿರುವ ತಮಸ್ಸನ್ನು ಭೇದವನ್ನು ತಿಳಿದವನು ಪಡೆಯುತ್ತಾನೆ. ಈ ವಿಷಯದಲ್ಲಿ ಎಚ್ಚರಿಕೆಯಿಂದ ಇರಬೇಕು. ಹಿಂದೆ ಭಗವಂತನ ಸ್ವರೂಪದಲ್ಲಿ ಭೇದವನ್ನು, ಭೇದಾಭೇದವನ್ನು ತಿಳಿದವರಿಗೆ ಅನರ್ಥವನ್ನು ತಿಳಿಸಿದ್ದಾರೆ. ಪ್ರಕೃತ ಭಗವಂತನ ಗುಣ-ಕ್ರಿಯಾ-ಅವಯವಗಳಿಗೆ ಮತ್ತು ಭಗವಂತನಿಗೆ ಭೇದವನ್ನು, ಭೇದಾಭೇದವನ್ನು ತಿಳಿದವರಿಗೆ ಅನರ್ಥವನ್ನು ತಿಳಿಸಿದ್ದಾರೆ. ಆದ್ದರಿಂದ ಪೌನರುಕ್ತ್ಯದೋಷಾಪಾದಕವಾಗುವುದಿಲ್ಲ. ಇದನ್ನು ಗಮನಿಸಬೇಕು.

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ । ಏತದ್ ವೈ ತತ್ ॥**

ಹೃದಯಗುಹಾದಲ್ಲಿ ಶ್ರೀಹರಿ ಇರುವ ಪ್ರಕಾರವನ್ನು ಮತ್ತು ಗುಹಾಸ್ಥಿತನಾದ ಪರಮಾತ್ಮನ ಉಪಾಸನೆಯನ್ನು ಮಾಡುವುದಕ್ಕಾಗಿ ಆ ಪರಮಾತ್ಮನ ಪರಿಮಾಣವಿಶೇಷವನ್ನು ಈ ಮಂತ್ರ ತಿಳಿಸುತ್ತದೆ.

ಜೀವರ ಹೃದಯವಿದು ಆಯಾ ಜೀವರ ಅಂಗುಷ್ಠದಷ್ಟು ಪರಿಮಿತವಾಗಿರುತ್ತದೆ. ಅಲ್ಲಿ ಇರುವ ಪರಮಾತ್ಮನು ಕೂಡಾ ಅಂಗುಷ್ಠಪರಿಮಿತನಾಗಿರುತ್ತಾನೆ. ಅಷ್ಟು ಪರಿಮಾಣದಿಂದ ಮಾತ್ರ ಭಗವಂತ ಅಲ್ಲಿ ಅಭಿವ್ಯಕ್ತನಾಗಿರುತ್ತಾನೆ. ಆದ್ದರಿಂದ ಭಗವಂತನನ್ನು ''ಅಂಗುಷ್ಠಮಾತ್ರ'' ಎಂದು ಹೇಳಿದ್ದು. ಈ ವಿಷಯವನ್ನು ''ಹೃದ್ಯಪೇಕ್ಷಯಾ ಮನುಷ್ಯಾಧಿಕಾರತ್ವಾತ್'' ಎಂಬ ಸೂತ್ರವು ತಿಳಿಸುತ್ತದೆ. (ಇದರ ಅರ್ಥವಿಷ್ಟು, ವಿಷ್ಣುವು ಸರ್ವಗತನಾಗಿದ್ದರೂ ಅಂಗುಷ್ಠಪರಿಮಿತವಾದ ಹೃದಯದಲ್ಲಿ ಅಂಗುಷ್ಠಪರಿಮಾಣನಾಗಿ ಇರುತ್ತಾನೆ. ತಾವನ್ಮಾತ್ರೇಣ ಪರಮಾತ್ಮನಲ್ಲಿ ಪರಿಚ್ಛೇದವನ್ನು ಚಿಂತಿಸಬಾರದು. ಅವನು ಅಪರಿಚ್ಛಿನ್ನನಾಗಿಯೇ ಇರುತ್ತಾನೆ.) ಇಲ್ಲಿ ಉಕ್ತನಾದವನು ಪುರುಷ ಅರ್ಥಾತ್ ಜೀವನಲ್ಲ, ಕಿಂತು ಈಶಾನ-ಸರ್ವಸ್ವಾಮಿಯಾದವನು. ಆದ್ದರಿಂದ ಪ್ರಕೃತನಾದ ಪುರುಷ ಪೂರ್ಣವಾದ

ಷಡ್ಗುಣಗಳುಳ್ಳವನೆಂದು ತಿಳಿಯಬೇಕು. ಈ ರೀತಿಯಾಗಿ ಪರಮಾತ್ಮನನ್ನು ತಿಳಿದವನು ತನ್ನ ರಕ್ಷಣೆಗೆ ಯಾವುದೇ ರೀತಿಯಾದ ಪ್ರಯತ್ನವನ್ನು ಮಾಡುವದಿಲ್ಲ. ನೀನು ಕೇಳಿದ ಪರಮಾತ್ಮನ ಸ್ವರೂಪ ಇದೇ ಆಗಿದೆ. ಇದನ್ನು ತಿಳಿದುಕೊ.

**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ । ಏತದ್ ವೈ ತತ್ ॥**

ಹಿಂದೆ ಹೇಳಿದ ವಿಷಯವನ್ನು ಅನುವಾದಮಾಡುತ್ತಾ ಪರಮಾತ್ಮನಲ್ಲಿ ಗುಣಾಂತರವನ್ನು ತಿಳಿಸಿಕೊಡುತ್ತದೆ ಈ ಮಂತ್ರ.

ಧೂಮವಿಲ್ಲದ ಅಗ್ನಿಯಂತೆ ಪರಮಾತ್ಮ ಪ್ರಕಾಶಮಾನನಾಗಿದ್ದಾನೆ. ಅರ್ಥಾತ್ ಅವನು ನಿರ್ಮಲನಾಗಿದ್ದಾನೆ. ಅವನು ವರ್ತಮಾನದಲ್ಲಿಯೂ ಇದ್ದಾನೆ. ಭವಿಷ್ಯತ್ಕಾಲದಲ್ಲಿಯೂ ಇರುತ್ತಾನೆ. ಹಿಂದೆಯೂ ಇದ್ದವನು. ಹೀಗಾಗಿ ಅನಾದಿ-ನಿತ್ಯನಾಗಿದ್ದಾನೆ ಪರಮಾತ್ಮ ಅಂಗುಷ್ಠಪರಿಮಾಣಉಳ್ಳವನಾಗಿ ಜೀವರ ಹೃದಯದಲ್ಲಿ ಇದ್ದಾನೆ. ಎಲ್ಲರಿಗೂ ಪ್ರೇರಕನಾಗಿ ಇದ್ದಾನೆ. ನೀನು ಕೇಳಿದ ಪರಮಾತ್ಮನ ಸ್ವರೂಪವು ಇದಾಗಿದೆ.

ಹಿಂದೆ ಹೇಳಿದ ವಿಷಯವನ್ನೇ ಇಲ್ಲಿ ಹೇಳಿದ್ದರೂ ಅಲ್ಲಿ ಹೇಳದಿರುವ ಅಪೂರ್ವವಾದ ಅನಾದಿನಿತ್ಯತ್ವವನ್ನು ಮತ್ತು ಜ್ಯೋತಿರ್ಮಯತ್ವವನ್ನೂ ಈ ಮಂತ್ರ ತಿಳಿಸುತ್ತದೆ ಆದ್ದರಿಂದ ಪುನರುಕ್ತಿಯು ದೋಷಾಪಾದಕವಾಗುವದಿಲ್ಲ. ॥೨.೧.೧೩॥

**ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು ವಿಧಾವತಿ ॥೨.೧.೧೪॥**

''ನಾನೇವ ಪಶ್ಯತಿ'' ಎಂಬ ವಚನ ಭೇದಾಭೇದದರ್ಶಿಗಳಿಗೆ ಅನರ್ಥವನ್ನು ಹೇಳುತ್ತದೆ. ಭೇದದರ್ಶಿಗಳಿಗೆ ಅನರ್ಥವನ್ನು ಹೇಳುವುದಿಲ್ಲ. ಅದು ಹೇಗೆಂದರೆ ''ನಾನೇವ'' ಎಂಬಲ್ಲಿ ''ನಾನಾ'' ಎಂಬ ಶಬ್ದದಿಂದ ಭೇದವು ಪ್ರಸ್ತುತವಾಗಿದೆ. ''ಇವ'' ಎಂಬ ಶಬ್ದಕ್ಕೆ ವಿರುದ್ಧ ಎಂಬ ಅರ್ಥವಿರುವುದರಿಂದ ಭೇದವಿರುದ್ಧವಾದ ಅಭೇದ ಎಂಬ ಅರ್ಥವು ಬರುತ್ತದೆ. ಒಟ್ಟಾರೆ ''ನಾನೇವ'' ಎಂದರೇ ಭೇದಾಭೇದವೆಂದು ಅರ್ಥವಾಗುತ್ತದೆ. ಹೀಗಾಗಿ ಭೇದಾಭೇದ-ದರ್ಶಿಗಳಿಗೆ ಅನರ್ಥವನ್ನು ಹೇಳಿದ್ದಾರೆಯೇ ಹೊರತು ಭೇದವನ್ನು ಚಿಂತಿಸಿದವರಿಗೆ ಯಾವುದೇ ಅನರ್ಥವನ್ನು ಹೇಳಿಲ್ಲ. ಆದ್ದರಿಂದ ಭಗವಂತನಿಗೆ ಅವನ ಗುಣಾದಿಗಳಿಗೆ ಭೇದವನ್ನು ತಿಳಿಯಬಹುದು ಎಂಬ ಶಂಕೆಯು ಬರುತ್ತದೆ. ಈ ಮಂತ್ರವು ಭೇದದರ್ಶಿಗಳಿಗೆ ಅನರ್ಥವನ್ನು ಹೇಳುವ ಮುಖಾಂತರ ಈ ಶಂಕೆಯನ್ನು ಪರಿಹರಿಸುತ್ತದೆ.

ಪರ್ವತಗಳ ದುರ್ಗಮವಾದ ಶಿಖರದಲ್ಲಿ ವೃಷ್ಟವಾಗಿರುವ ಜಲ ಕೆಳಗೆ ಧುಮುಕುತ್ತಾ ಅತಿಯಾದ ವೇಗದಿಂದ ಪ್ರಪಾತವನ್ನು ಸೇರುತ್ತದೆ. ಹಾಗೆಯೇ ವಿಷ್ಣುವಿನ ಧರ್ಮಗಳಿಗೆ

ಪರಸ್ಪರವಾಗಿ ಮತ್ತು ಧರ್ಮಗಳಿಂದ ವಿಷ್ಣುವಿಗೆ ಭೇದವನ್ನು ಯಾರು ಚಿಂತಿಸುತ್ತಾರೋ ಅವರು ಶೀಘ್ರವಾಗಿ ಅಂಧಂತಮಸ್ಸನ್ನು ಪಡೆಯುತ್ತಾರೆ.

**ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।**
**ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥೨.೧.೧೫॥**

ಮುಕ್ತರಾದವರಿಗೆ ಪರಮಾತ್ಮನಲ್ಲಿ ಪ್ರವೇಶವನ್ನು ಹೇಳಿದ್ದಾರೆ. ಅಂದಮೇಲೆ ಮುಕ್ತರು ಪರಮಾತ್ಮನಿಂದ ಅಭಿನ್ನರಾಗಿದ್ದಾರೆ ಎಂದು ಅರ್ಥಾತ್ ಸಿದ್ಧವಾಗುತ್ತದೆ. ಹೀಗಿರುವಾಗ ಮುಕ್ತರಾದವರಿಗೆ ಪರಮಾತ್ಮ ನಿಯಾಮಕನಾಗಿದ್ದಾನೆ ಎಂದು ಹೇಗೆ ಹೇಳುವದು ? ಎಂಬ ಪ್ರಶ್ನೆ ಬರುತ್ತದೆ. ಮತ್ತು ಭಗವಂತನ ಅವತಾರರೂಪಗಳಿಗೆ, ಅವಯವ-ಕ್ರಿಯಾ-ಗುಣ ಮೊದಲಾದ ಧರ್ಮಗಳಿಗೆ ಭಗವಂತನಿಂದ ಭೇದವಾಗಲೀ, ಭೇದಾಭೇದವಾಗಲೀ ಇರುವದಿಲ್ಲ, ಅವೆಲ್ಲವೂ ಅತ್ಯಂತಾಭಿನ್ನವಾಗಿವೆ. ಹಾಗೆಯೇ ಮುಕ್ತರು ಕೂಡಾ ಭಗವಂತನಿಂದ ಅತ್ಯಂತಾಭಿನ್ನರಾಗಿದ್ದಾರೆ ಎಂಬ ಶಂಕೆಯೂ ಬರುತ್ತದೆ. ಪ್ರಸ್ತುತವಾದ ಮಂತ್ರದ ಅರ್ಥವನ್ನು ತಿಳಿಯುವುದರಿಂದ ಈ ಶಂಕೆಗಳಿಗೆ ಸಮಾಧಾನವು ದೊರಕುತ್ತದೆ.

ಗೌತಮಗೋತ್ರದಲ್ಲಿ ಜನಿಸಿದ ಹೇ ನಚಿಕೇತನೇ ! ಶುದ್ಧವಾದ ಜಲವನ್ನು ಶುದ್ಧವಾದ ಜಲದಲ್ಲಿ ಸೇರಿಸಿದಾಗ ಪೂರ್ವದಲ್ಲಿರುವ ಜಲದಿಂದ ಪಶ್ಚಾತ್ ಸೇರಿಕೊಂಡ ಜಲ ಅಭಿನ್ನವಾಗುವದಿಲ್ಲ. ಪೂರ್ವಭಾವಿಯಾದ ಅದೇ ಜಲದಂತೆ ತೋರುತ್ತದೆ. ಆ ಜಲದಿಂದ ಅಭಿನ್ನವೆ ಆಗಿದೆ ಎಂದು ಹೇಳಿದರೆ ಜಲದಲ್ಲಿ ವೃದ್ಧಿ ತೋರಬಾರದು. ಹಾಗೆಯೇ ಮುಕ್ತರಾದವರು ಬ್ರಹ್ಮಸ್ವರೂಪರಾಗುತ್ತಾರೆ ಎಂದು ಎಲ್ಲಿಯಾದರೂ ಹೇಳಿದರೆ ಅವರು ಬ್ರಹ್ಮನಿಗೆ ಸದೃಶರಾಗುತ್ತಾರೆ ಎಂದು ತಿಳಿಯಬೇಕು. ಅಭೇದವನ್ನು ಸರ್ವಥಾ ತಿಳಿಯಬಾರದು.

ಈ ವಿಷಯವನ್ನು ಕೈಮುತ್ಯನ್ಯಾಯದಿಂದ ಸ್ಪಷ್ಟಪಡಿಸಿಕೊಳ್ಳಬೇಕು. ವಿಜ್ಞಾನಿಗಳಾದ, ಮನನಶೀಲರಾದುದರಿಂದ ಮುನಿಗಳಾದವರೆಲ್ಲರಿಗೂ ಸ್ವಾಮಿಯಾಗಿದ್ದಾರೆ ಬ್ರಹ್ಮದೇವರು. ಪರಮಾತ್ಮನಿಗೆ ಸಾಕ್ಷಾತ್ ಪ್ರತಿಬಿಂಬರಾಗಿದ್ದಾರೆ. ಇಂತಹ ಚತುರ್ಮುಖಬ್ರಹ್ಮದೇವರು ಕೂಡಾ ಮುಕ್ತರಾದ ಮೇಲೆ ಪರಮಾತ್ಮನಿಗೆ ಸದೃಶರಾಗುತ್ತಾರೆ. ಹೊರತು ಬ್ರಹ್ಮನಿಂದ ಅಭಿನ್ನರಾಗುವುದಿಲ್ಲ, ಪರಮಾತ್ಮನಿಗೆ ಆಭಾಸಾಭಾಸರಾದ, ಪರಂಪರಯಾ ಪ್ರತಿಬಿಂಬರಾಗಿರುವ ಜೀವರಾಶಿಗಳು ಮುಕ್ತರಾದ ಮೇಲೆ ಭಗವಂತನಿಗೆ ಅಭಿನ್ನರಾಗಿರುವುದಿಲ್ಲವೆಂದು ಹೇಳುವದು ಕಿಮುತ. ಈ ವಿಷಯ ಸುಲಭವಾಗಿ ಸಿದ್ಧಿಸುತ್ತದೆ.

॥ ಇತಿ ದ್ವಿತೀಯೇಽಧ್ಯಾಯೇ ಪ್ರಥಮಾ ವಲ್ಲೀ ॥

## ॥ ಅಥ ಶ್ರೀಕಾಠಕಭಾಷ್ಯೇ ದ್ವಿತೀಯೇಽಧ್ಯಾಯೇ ದ್ವಿತೀಯಾ ವಲ್ಲೀ ॥

**ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।**
**ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ । ಏತದ್ ವೈ ತತ್ ॥**

ಮುಮುಕ್ಷುವಾದವನು ದೇಹ-ಗೇಹಾದಿಗಳಲ್ಲಿ ಮಮತೆಯನ್ನು ತ್ಯಜಿಸಬೇಕೆಂಬುದನ್ನು ಮತ್ತು ಸರ್ವತ್ರ ಭಗವದಧೀನತ್ವವನ್ನು ತಿಳಿಯುವವರು ಮುಕ್ತಿಯನ್ನು ಪಡೆಯುತ್ತಾರೆ ಎಂಬ ವಿಷಯವನ್ನು ತಿಳಿಸಲು ಈ ಮಂತ್ರ ಪ್ರವೃತ್ತವಾಗಿದೆ.

ಈ ದೇಹ ಹನ್ನೊಂದು ದ್ವಾರಗಳಿಂದ ಯುಕ್ತವಾಗಿದೆ. ಎರಡು ಕಿವಿಗಳು, ಎರಡು ಕಣ್ಣುಗಳು, ಎರಡು ನಾಸಿಕಾಗಳು, ಮುಖ ಒಂದು, ನಾಭಿ, ಆಸನ, ಗುಹ್ಯ ಇವು ಮೂರು ಶಿರಸ್ಸಿನಲ್ಲಿಯ ಬ್ರಹ್ಮನಾಡಿಯೊಂದು ಹೀಗೆ ಹನ್ನೊಂದು ದ್ವಾರಗಳು ಈ ಶರೀರಕ್ಕೆ ಇವೆ. ಅಥವಾ ಹನ್ನೊಂದು ಇಂದ್ರಿಯದ ಸ್ಥಾನಗಳೇ ಹನ್ನೊಂದು ದ್ವಾರಗಳೆಂದು ತಿಳಿಯಬೇಕು. ಇಂತಹ ಶರೀರ ಜನನ-ಮರಣಾದಿರಹಿತನಾದ, ಋಜುಜ್ಞಾನಿಯಾದ ಭಗವಂತನಿಗೆ ಅಧೀನ-ವಾಗಿದೆ ಎಂದು ತಿಳಿಯಬೇಕು. ಈ ಜ್ಞಾನ ಶರೀರಾದಿಗಳ ಮೇಲಿನ ಮಮತೆಯನ್ನು ಕ್ರಮವಾಗಿ ತೊಲಗಿಸುತ್ತದೆ. ಅಭಿಮಾನವನ್ನು ಪರಿತ್ಯಜಿಸಿದವನಿಗೆ ಶರೀರಾದಿಗಳ ಕ್ಷಯದಿಂದ ಶೋಕವಾಗುವದಿಲ್ಲ. ಶರೀರಾದಿಗಳ ಮೇಲೆ ಅಭಿಮಾನವನ್ನು ಪರಿತ್ಯಜಿಸಿದ ಕಾರಣ ಜೀವನ್ಮುಕ್ತನಾದ ಅವನಿಗೆ ಸಂಸಾರ ದಗ್ಧಪಟಾಯಮಾನವಾಗಿರುತ್ತದೆ. ಆದ್ದರಿಂದ ಅಪರೋಕ್ಷಜ್ಞಾನಿಯಾದವನು ಮುಕ್ತನಾಗಿಯೇ ಇರುತ್ತಾನೆ. ಇಂಥವನು ನಂತರ ಪರಮಾತ್ಮನ ಅತ್ಯರ್ಥಪ್ರಸಾದದಿಂದ ವಿಶೇಷವಾದ ಲಿಂಗಶರೀರಭಂಗರೂಪವಾದ, ಸ್ವರೂಪಾನಂದಾನು-ಭವಾತ್ಮಕವಾದ ಮುಕ್ತಿಯನ್ನು ಪಡೆಯುತ್ತಾನೆ. ಇದುವೇ ನೀನು ಕೇಳಿದ ಪರಮಾತ್ಮನ ಸ್ವರೂಪವಾಗಿದೆ.

**ಹಂಸಃ ಶುಚಿಷದ್ ವಸುರಂತರಿಕ್ಷಸತ್**
**ಹೋತಾ ವೇದಿಷದತಿಥಿಃ ದುರೋಣಸತ್ ।**
**ನೃಷದ್ವರಸತ್ ಋತಸತ್ ವ್ಯೋಮಸದಬ್ಜಾ**
**ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ ॥ ೨.೨.೧॥**

ಹದಿನೆಂಟು ವಿಶೇಷಣಗಳಿಂದ ಪರಮಾತ್ಮನ ಅಗಾಧವಾದ ಮಹಿಮೆಯನ್ನು ತಿಳಿಸುತ್ತದೆ ಈ ಮಂತ್ರ. ಇಲ್ಲಿಯ ಪದಗಳು ಸರಿಯಾಗಿ ಅರ್ಥವಾಗುವುದಿಲ್ಲ, ಅರ್ಥವಾದರೂ ವಿಪರೀತವಾದ ಅರ್ಥವೇ ತೋರುತ್ತದೆ. ಆದ್ದರಿಂದ ಯಥಾರ್ಥವಾದ ಅರ್ಥವನ್ನು ಶ್ರೀಮದಾಚಾರ್ಯರು ತಿಳಿಸಿದ್ದಾರೆ. ಅದನ್ನು ನಾವು ಈ ರೀತಿಯಾಗಿ ತಿಳಿಯಬೇಕು.

೧) **ಹಂಸಃ**- ಹಂ-ನಿತ್ಯವೂ ದೋಷಹೀನನಾಗಿರುತ್ತಾನೆ ಆದ್ದರಿಂದ ಹಮ್. ಸ-ಸಾರರೂಪನಾಗಿದ್ದಾನೆ. ದೋಷದೂರನಾಗಿ ಸಾರರೂಪನಾಗಿರುತ್ತಾನೆ ಆದ್ದರಿಂದ ಪರಮಾತ್ಮ ಹಂಸ ನಾಮಕನಾಗಿದ್ದಾನೆ.

೨) **ಶುಚಿಷತ್**- ಶುಚಿ-ಶುಚೌ ಪಾಪಾವಿದ್ಧರಾದದ್ದರಿಂದ ವಾಯುದೇವರು ಶುಚಿಯಾಗಿದ್ದಾರೆ. ಇಂತಹ ಶುದ್ಧರಾದ ವಾಯುದೇವರಲ್ಲಿ ಷತ್- ಸೀದತಿ ಸನ್ನಿಹಿತನಾಗಿದ್ದಾನೆ ಆದ್ದರಿಂದ ಪರಮಾತ್ಮ ಶುಚಿಷತ್ ಆಗಿದ್ದಾನೆ.

೩) **ವಸುಃ**- ವ-ವರ-ಉತ್ತಮವಾದ ಸು-ಸುಖ, ಸುಖಸ್ವರೂಪನಾಗಿದ್ದಾನೆ ಆದ್ದರಿಂದ **ವಸು** ನಾಮಕನಾಗಿದ್ದಾನೆ.

೪) **ಅಂತರಿಕ್ಷಸತ್**- ಅಂತರಿಕ್ಷದಲ್ಲಿ ನೆಲೆಸಿದ್ದಾನೆ.

೫) **ಹೋತಾ**- ಋತ್ವಿಜರ ಇಂದ್ರಿಯಗಳಲ್ಲಿದ್ದು ಹೋಮಕರ್ಮವನ್ನು ಸ್ವತಂತ್ರವಾಗಿ ಮಾಡುತ್ತಾನೆ. ಮತ್ತು ಎಲ್ಲ ವಿಷಯಗಳನ್ನು ಇಂದ್ರಿಯಗಳಲ್ಲಿ ಹೋಮಮಾಡುತ್ತಾನೆ ಆದ್ದರಿಂದ **ಹೋತಾ** ನಾಮಕನಾಗಿದ್ದಾನೆ.

೬) **ವೇದಿಷತ್**-ವೇದಿ-ವೇದ್ಯಾಂ ವೇದಿಕೆಯಲ್ಲಿ ಷತ್-ಸೀದತಿ ಇರುತ್ತಾನೆ. ಇದ್ದು ಭಕ್ತರು ಮಾಡುವ ಪೂಜೆಯನ್ನು ಸ್ವೀಕರಿಸುತ್ತಾನೆ ಆದ್ದರಿಂದ ವೇದಿಷತ್.

೭) **ಅತಿಥಿಃ**- ಅತಿ-ಅತಿಶಯಿತವಾದ ಥಂ-ಅನ್ನವಿರುವವನು ಅತಿಥಿ ನಾಮಕನಾಗಿದ್ದಾನೆ.

೮) **ದುರೋಣಸತ್**-ದುರೋಣ-ದ್ರೋಣೇ ದ್ರೋಣಕಲಶದಲ್ಲಿರುವ ಸೋಮರಸ ದಲ್ಲಿ ಸತ್- ಸೀದತಿ ಇರುತ್ತಾನೆ. ಆದ್ದರಿಂದ **ದುರೋಣಸತ್** ನಾಮಕನಾಗಿದ್ದಾನೆ.

೯) **ನೃಷತ್**- ನೃ-ಮನುಷ್ಯರಲ್ಲಿ ಸತ್ ಸೀದತಿ ಇರುವವನು ಆದ್ದರಿಂದ **ನೃಷತ್** ನಾಮಕನಾಗಿದ್ದಾನೆ ಪರಮಾತ್ಮ

೧೦) **ವರಸತ್**- ವರ- ಮನುಷ್ಯರಿಗಿಂತಲೂ ಉತ್ತಮರಾದ ಬ್ರಹ್ಮಾದಿದೇವತೆಗಳಲ್ಲಿ ಸತ್ ಸೀದತಿ ನಿಯಾಮಕನಾಗಿ ಇರುತ್ತಾನೆ ಆದ್ದರಿಂದ ಪರಮಾತ್ಮ ವರಸತ್ ನಾಮಕನಾಗಿದ್ದಾನೆ.

೧೧) **ಋತಸತ್**- ಋತ- ಋತೇ ಯಥಾರ್ಥರೂಪವಾದ ವೇದಗಳಲ್ಲಿ ಸತ್ ಸೀದತಿ ಮುಖ್ಯಪ್ರತಿಪಾದ್ಯನಾಗಿ ಇರುವವನು ಆದ್ದರಿಂದ ಪರಮಾತ್ಮ **ಋತಸತ್** ನಾಮಕನಾಗಿದ್ದಾನೆ.

೧೨) **ವ್ಯೋಮಸತ್**- ವ್ಯೋಮ- ವ್ಯೋಮ್ನಿ ಜಡವಾದ ಪ್ರಕೃತಿಯಲ್ಲಿ ಚೇತನಪ್ರಕೃತಿಯಾದ ಲಕ್ಷ್ಮೀದೇವಿಯಲ್ಲಿ ಇರುತ್ತಾನೆ ಆದ್ದರಿಂದ ಪರಮಾತ್ಮ **ವ್ಯೋಮಸತ್** ನಾಮಕನಾಗಿದ್ದಾನೆ.

೧೩) **ಅಬ್ಜಾಃ**- ಅದ್ಭ್ಯಃ ಸಂಭೂತಃ ಎಂಬ ವಚನದಿಂದ ಜಲದಿಂದ ಜನಿಸಿದವರು

ಬ್ರಹ್ಮದೇವರು ಆದ್ದರಿಂದ ಅಬ್ಜನಾಮಕರಾಗಿದ್ದಾರೆ. ಅಬ್ಜನಾಮಕರಾದ ಬ್ರಹ್ಮದೇವರಲ್ಲಿ ನಿಯಾಮಕನಾಗಿದ್ದ ಪರಮಾತ್ಮ **ಅಬ್ಜಾಃ** ಎನಿಸಿಕೊಳ್ಳುತ್ತಾನೆ.

ಅಥವಾ ಜಲದಲ್ಲಿ ಹುಟ್ಟಿದ ಶಂಖ ಮೊದಲಾದವುಗಳು ಅಬ್ಜ. ಅವುಗಳಲ್ಲಿ ತನ್ನ ಸನ್ನಿಧಾನವನ್ನು ಇಟ್ಟಿರುತ್ತಾನೆ ಆದ್ದರಿಂದ **ಅಬ್ಜಾಃ** ಎನಿಸಿಕೊಳ್ಳುತ್ತಾನೆ.

೧೪) **ಗೋಜಾಃ**- ಗೌಃ ಎಂದರೆ ಮಾತುಗಳು. ಅರ್ಥಾತ್ ಮಾತುಗಳಿಗೆ ಅಭಿಮಾನಿನಿಯಾಗಿರುವ ಸರಸ್ವತೀದೇವಿ. ಅವಳಲ್ಲಿ ಜನಿಸಿದ ಗರುಡಾದಿಗಳು ಗೋಜ ಎಂದು ಕರೆಯಲ್ಪಡುತ್ತಾರೆ. ಆ ಗರುಡ-ರುದ್ರಾದಿಗಳಲ್ಲಿ ಇರುವವನು **ಗೋಜಾಃ** ಎನಿಸಿಕೊಳ್ಳುತ್ತಾನೆ.

ಗೌಃ ಎಂದರೆ ಭೂಮಿ. ಭೂಮಿಯಲ್ಲಿ ಜನಿಸುವ ವ್ರೀಹಿ-ಯವ ಮೊದಲಾದ ಧಾನ್ಯಗಳು ಗೋಜ ಎನಿಸಿಕೊಳ್ಳುತ್ತವೆ. ಈ ಗೋಜವಾದ ಧಾನ್ಯಗಳಲ್ಲಿ ಸನ್ನಿಹಿತನಾಗಿದ್ದಾನೆ ಆದ್ದರಿಂದ **ಗೋಜಾಃ** ಪರಮಾತ್ಮ.

ಗೌಃ ಎಂದರೆ ಆಕಳು. ಅದರಿಂದ ಜನ್ಯವಾದ ಕ್ಷೀರವಿದು ಗೋಜ. ಕ್ಷೀರದಲ್ಲಿ ವಿಶೇಷವಾಗಿ ಸನ್ನಿಹಿತನಾಗಿದ್ದಾನೆ ಆದ್ದರಿಂದಲೂ ಭಗವಂತ **ಗೋಜಾಃ** ಎನಿಸುತ್ತಾನೆ.

೧೫) **ಋತಜಾಃ**- ಋತ- ಋಚ್ಛಂತಿ ಗಚ್ಛಂತಿ ಇತಿ ಮುಕ್ತಾಃ ವಿಷ್ಣುವನ್ನು ಹೊಂದಿ ಇದ್ದವರು ಋತರು ಎಂದರೆ ಮುಕ್ತರು ಎಂದು ಅರ್ಥ, ಇಂತಹ ಮುಕ್ತರಲ್ಲಿ ನಿಯಾಮಕನಾಗಿ ಇದ್ದವನು **ಋತಜಾಃ** ನಾಮಕನಾಗಿದ್ದಾನೆ.

೧೬) **ಅದ್ರಿಜಾಃ**- ಅದ್ರಿ- ಇಂದ್ರಾದಿಗಳಿಂದ ಆದರಣೀಯನಾಗಿದ್ದಾನೆ ಆದ್ದರಿಂದ ಅದ್ರಿ ರುದ್ರದೇವರು. ಅವರಿಂದ ಜನಿಸಿದ ಇಂದ್ರ ಅದ್ರಿಜನಾಗಿದ್ದಾನೆ. ಅದ್ರಿಜನಾದ ಇಂದ್ರನಲ್ಲಿ ನಿಯಾಮಕನಾಗಿರುವ ಪರಮಾತ್ಮ **ಅದ್ರಿಜಾಃ** ಎನಿಸಿಕೊಳ್ಳುತ್ತಾನೆ.

ಪರ್ವತಗಳಿಂದ ಜನಿಸಿದ ನದ್ಯಾದಿಗಳಲ್ಲಿ ಇರುತ್ತಾನೆ ಆದ್ದರಿಂದಲೂ ಅದ್ರಿಜಾನಾಮಕನಾಗಿದ್ದಾನೆ ಭಗವಂತ. ಅದ್ರಿಜವಾದ ಪರ್ವತಗಳಲ್ಲಿ ಇರುವ ರತ್ನಾದಿಗಳಲ್ಲಿ ಇರುತ್ತಾನೆ ಆದ್ದರಿಂದಲೂ **ಅದ್ರಿಜಾಃ** ಎನಿಸುತ್ತಾನೆ ಪರಮಾತ್ಮ.

೧೭) **ಋತಮ್**- ಋಚ್ಛಂತಿ ಮುಖ್ಯತಃ ಏವ ವೇದಾಃ ಗಚ್ಛಂತಿ ವಾಚಕತ್ವೇನ ಇತಿ ಭಗವಾನ್ ಮುಖ್ಯತಃ ಋತಮ್ ಅರ್ಥಾತ್ ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಆದ್ದರಿಂದ **ಋತ** ನಾಮಕನಾಗಿದ್ದಾನೆ.

೧೮) **ಬೃಹತ್**- ಗುಣಗಳಿಂದ ಬೃಹತ್ ಆದ ಪರಿಪೂರ್ಣನಾದ ಪರಮಾತ್ಮ **ಬೃಹತ್** ನಾಮಕನಾಗಿದ್ದಾನೆ. ನೀನು ಕೇಳಿದ ಭಗವಂತನ ಸ್ವರೂಪವು ಇದಾಗಿದೆ.

ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।
ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥೨.೨.೩॥

ಅಂಗುಷ್ಠಗಾತ್ರದ, ಷಡ್ಗುಣಗಳಿಂದ ಪೂರ್ಣನಾದ ಪರಮಾತ್ಮ ಹೃದಯದ ಮಧ್ಯದಲ್ಲಿ ಇದ್ದುಕೊಂಡು ಮಾಡುವ ವ್ಯಾಪಾರವೇನೆಂಬುದನ್ನು ಈ ಮಂತ್ರ ತಿಳಿಸುತ್ತದೆ.

ವಾಮ ಎಂದರೆ ಸೌಂದರ್ಯ. ಸೌಂದರ್ಯವೇ ಪ್ರಧಾನವಾಗಿದ್ದವರು ವಾಮರು. ಅರ್ಥಾತ್ ಸ್ತ್ರೀಯರು. ಅವರನ್ನು ನಯನ ಮಾಡುತ್ತಾನೆ ನಿಯಮನ ಮಾಡುತ್ತಾನೆ ಆದ್ದರಿಂದ ಭಗವಂತ ವಾಮನನಾಮಕನಾಗಿದ್ದಾನೆ. ಈ ಪರಮಾತ್ಮ ಮುಖ್ಯಪ್ರಾಣನ ರೂಪವಾದ ಪ್ರಾಣವಾಯುವನ್ನು ಶರೀರದಲ್ಲಿ ಮೇಲಕ್ಕೆ ಹೋಗುವಂತೆ ಪ್ರೇರಿಸಿ ಶ್ವಾಸೋಚ್ಛ್ವಾಸಕ್ಕೆ ಅನುಕೂಲವಾಗುವಂತೆ ಮಾಡುತ್ತಾನೆ. ಮತ್ತು ಮುಖ್ಯಪ್ರಾಣರೂಪವಾದ ಅಪಾನವಾಯುವನ್ನು ಶರೀರದಲ್ಲಿ ಕೆಳಕ್ಕೆ ಹೋಗುವಂತೆ ಪ್ರೇರಿಸಿ ಮಲ-ಮೂತ್ರಗಳ ವಿಸರ್ಜನೆಗೆ ಅನುಕೂಲವಾಗುವಂತೆ ಮಾಡುತ್ತಾನೆ. ಎಲ್ಲ ಮನುಷ್ಯರ ಹೃದಯದ ಮಧ್ಯಭಾಗದಲ್ಲಿ ವಾಸಮಾಡಿರುವ ವಾಮನರೂಪಿಯಾದ ಪರಮಾತ್ಮನನ್ನು ಎಲ್ಲ ದೇವತೆಗಳು ಉಕ್ತಮಹಿಮೋಪೇತನಾಗಿದ್ದಾನೆ ಎಂದು ಉಪಾಸನೆ ಮಾಡುತ್ತಾರೆ. ಹೀಗೆ ವಿಷ್ಣುವನ್ನು ಆಶ್ರಯಿಸಿಕೊಂಡು ಮುಖ್ಯಪ್ರಾಣದೇವರು ಜೀವರನ್ನು ಬದುಕಿಸುತ್ತಾರೆ. ಆದ್ದರಿಂದ ಚೇತನರಿಗೆಲ್ಲರಿಗೂ ಸ್ವತಂತ್ರವಾಗಿ, ಮುಖ್ಯವಾಗಿ ಆಶ್ರಯನಾದವನು ವಿಷ್ಣುವೇ ಆಗಿದ್ದಾನೆಂದು ತಿಳಿಯಬೇಕು.

**ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।**
**ದೇಹಾದ್ ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ । ಏತದ್ ವೈ ತತ್ ॥**

ಭಗವಂತನ ಹಲವು ಗುಣಧರ್ಮಗಳನ್ನು ಯಮದೇವರು ಉಪದೇಶಿಸಿದರು. ಸುಮ್ಮನೇ ಕುಳಿತರು. ಆದರೆ ನಚಿಕೇತನಿಗೆ ಮುಕ್ತಜೀವನಿಯಾಮಕತ್ವದ ವಿಷಯದಲ್ಲಿ ಇನ್ನೂ ಹೆಚ್ಚಿನ ವಿಷಯವನ್ನು ತಿಳಿಯಬೇಕಾಗಿದೆ. ಆದ್ದರಿಂದ ಮತ್ತೆ ಯಮದೇವರನ್ನು ಪ್ರಶ್ನಿಸುತ್ತಿದ್ದಾನೆ.

ಸ್ವಾಮೀ ! ಸ್ಥೂಲಶರೀರದಲ್ಲಿರುವ ಜೀವನು ಆ ದೇಹವನ್ನು ಪರಿತ್ಯಜಿಸಿ, ಸೂಕ್ಷ್ಮವಾದ ಲಿಂಗಶರೀರದಿಂದಲೂ ಮುಕ್ತನಾಗುತ್ತಾನೆ. ಆವಾಗ ಆ ಜೀವನಿಗೆ ನಿಯಾಮಕನಾಗಿ ಮುಕ್ತಿಯಲ್ಲಿ ಯಾರು ಇರುತ್ತಾರೆ ? ಈ ವಿಷಯವನ್ನು ತಿಳಿಸಬೇಕೆಂದು ನಚಿಕೇತ ಕೇಳಿದ. ಈ ಪ್ರಶ್ನೆಗೆ ಯಮದೇವರು ''ಏತದ್ವೈ ತತ್'' ''ನೀನು ಕೇಳಿದ ಭಗವಂತನ ಸ್ವರೂಪವು ನಾನು ಮುಂದೆ ತಿಳಿಸುವಂತೆ ಇದೆ'' ಹೀಗೆಂದು ಉತ್ತರವನ್ನು ಹೇಳುತ್ತಾರೆ.

ಈ ಮಂತ್ರದಲ್ಲಿ ನಚಿಕೇತ ಪ್ರಶ್ನೆಯನ್ನು ಕೇಳುತ್ತಿದ್ದಾನೆ ಎಂಬುದಾಗಿ ವ್ಯಾಸತೀರ್ಥರು ವ್ಯಾಖ್ಯಾನಿಸಿದ್ದಾರೆ. ಅವರಿಗೆ ಅನುಗುಣವಾಗಿಯೇ ಎಲ್ಲ ಟಿಪ್ಪಣಿಕಾರರೂ ಇದನ್ನು ಅನುಮೋದಿಸಿದ್ದಾರೆ. ಆದರೆ ವಾಮನಪಂಡಿತರು ಮಾತ್ರ ಇದು ಯಮನ ಉಪದೇಶಪರ-ವಾಗಿಯೇ ವಿಶಿಷ್ಟವಾಗಿ ವ್ಯಾಖ್ಯಾನಿಸಿದ್ದಾರೆ. ಪ್ರಶ್ನವಿಷಯಕವಾಗಿ ಇದನ್ನು ವಾಖ್ಯಾನ ಮಾಡಿಲ್ಲ.

**ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।**
**ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥೨.೨.೫॥**

ಪ್ರಾಣಾಪಾನರೂಪರಾದ ಮುಖ್ಯಪ್ರಾಣರೇ ಎಲ್ಲ ಜೀವರ ಪ್ರಾಣಧಾರಕರಾಗಿದ್ದಾರೆ. ಆದ್ದರಿಂದ ಸ್ಥೂಲಶರೀರದಿಂದ, ಸೂಕ್ಷ್ಮವಾದ ಲಿಂಗಶರೀರದಿಂದ ಯುಕ್ತನಾಗಿರುವಾಗಲೂ ಮತ್ತು ಈ ಶರೀರಗಳನ್ನು ಪರಿತ್ಯಜಿಸಿ ಮುಕ್ತನಾದಾಗಲೂ ಜೀವನಿಗೆ ನಿಯಾಮಕ-ರಾಗಿರುವವರು ಮುಖ್ಯಪ್ರಾಣರೇ ಆಗಿದ್ದಾರೆ. ಹೀಗಾಗಿ ಪ್ರಾಣನ ಉಪಾಸನೆಯನ್ನೇ ಮುಖ್ಯವಾಗಿ ಮಾಡಬೇಕೆಂಬ ಸಂಶಯ ಬರುತ್ತದೆ. ಇದನ್ನು ನಿವಾರಿಸಿ ಯಥಾರ್ಥವಾದ ತತ್ತ್ವವನ್ನು ತಿಳಿಸಲು ಈ ಮಂತ್ರ ಪ್ರವೃತ್ತವಾಗಿದೆ.

ಮುಖ್ಯಪ್ರಾಣನ ಪ್ರಾಣಾಪಾನರೂಪಗಳು ಸ್ವತಂತ್ರವಾಗಿ ಚೇತನರಾಶಿಗಳಿಗೆ ಜೀವನಪ್ರದವಾಗುವದಿಲ್ಲ, ಕಿಂತು ಪ್ರಾಣಾಪಾನಾದಿರೂಪರಾದ ವಾಯುದೇವರಿಂದ ಮತ್ತು ಸಕಲಜೀವಜಡಗಳಿಂದ ಅತ್ಯಂತವಿಲಕ್ಷಣನಾಗಿರುವ, ವಾಯುದೇವರಿಗೆ ಮುಖ್ಯವಾಗಿ ಆಶ್ರಯನಾದ ಭಗವಂತನಿಂದ ಪ್ರೇರಿತರಾಗಿಯೇ ಪ್ರಾಣಾಪಾನರೂಪಗಳು ಸಕಲರಿಗೂ ಜೀವನಪ್ರದವಾಗಿವೆ. ಅರ್ಥಾತ್ ಸ್ವತಂತ್ರವಾಗಿ ಮುಖ್ಯಪ್ರಾಣರು ಜೀವನಪ್ರದರಲ್ಲ, ಭಗವಂತನಿಗೆ ಅಧೀನರಾಗಿ ಜೀವನಪ್ರದರಾಗುತ್ತಾರೆ. ಆದ್ದರಿಂದ ಮುಖ್ಯಪ್ರಾಣರಿಗೆ ನಿಯಾಮಕನಾದ, ಮುಖ್ಯಪ್ರಾಣರಿಗೆ ಸಾಮರ್ಥ್ಯವನ್ನು ನೀಡಿ ಅವರ ಮೂಲಕ ಸಕಲಜೀವರಾಶಿಗಳನ್ನು ಸಲಹುವ ಪರಮಾತ್ಮನೇ ಪ್ರಧಾನವಾಗಿ ಉಪಾಸ್ಯನಾದವನು ಎಂದು ತಿಳಿಯಬೇಕು.

**ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।**
**ಯಥಾ ಮರಣಂ ಪ್ರಾಪ್ಯಾತ್ಮಾ ಭವತಿ ಗೌತಮ ॥೨.೨.೬॥**

ಮತ್ತೆ ಪರಮಾತ್ಮನ ಸ್ವರೂಪವನ್ನು ತಿಳಿಸುತ್ತೇನೆ ಎಂದು ಯಮದೇವರು ಪ್ರತಿಜ್ಞೆ ಮಾಡುತ್ತಿದ್ದಾರೆ.

ಹೇ ನಚಿಕೇತನೇ ! ನಾನು ನಿನಗೆ ಅತಿರಹಸ್ಯವಾದ, ಸನಾತನನಾದ, ಪರಬ್ರಹ್ಮನ ವಿಚಾರವನ್ನು ತಿಳಿಸುತ್ತೇನೆ. ಜೀವನು ಶರೀರವನ್ನು ಪರಿತ್ಯಜಿಸಿ ಏನಾಗುತ್ತಾನೆ ? ಶರೀರವನ್ನು ಪರಿತ್ಯಜಿಸುವ ಜೀವನನ್ನು ಹೊಂದಿದ ಪರಮಾತ್ಮ ಅವನಿಗೆ ಹೇಗೆ ನಿಯಾಮಕನಾಗಿ ಇರುತ್ತಾನೆ ? ಎಂಬ ವಿಷಯವನ್ನು ತಿಳಿಸುತ್ತೇನೆ. ಕೇಳು.

ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।
ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಮ್ ॥೨.೨.೭ ॥

ಮರಣವನ್ನು ಹೊಂದಿದ ಜೀವ ಏನಾಗುತ್ತಾನೆ ? ಎಂಬ ಪ್ರತಿಜ್ಞಾತವಾದ ವಿಷಯವನ್ನು ಯಮದೇವರು ಉಪದೇಶಮಾಡುತ್ತಿದ್ದಾರೆ.

ದೇಹಧಾರಣಯೋಗ್ಯರಾದ ಕೆಲವು ಜೀವರು ಮೃತರಾದಮೇಲೆ ತಮ್ಮ ತಮ್ಮ ಜ್ಞಾನ ಮತ್ತು ಕರ್ಮಗಳಿಗೆ ಅನುಗುಣವಾಗಿ ಮನುಷ್ಯ ಮೊದಲಾದ ಯೋನಿಯಲ್ಲಿ ಮತ್ತೆ ಜನಿಸುತ್ತಾರೆ. ಅವರಿಗೆ ನಿಯಾಮಕನಾಗಿ ಪರಮಾತ್ಮ ಆ ಯೋನಿಯಲ್ಲಿಯೂ ಇರುತ್ತಾನೆ. ಮತ್ತೆ ಕೆಲವರು ತಮ್ಮ ಪ್ರಾರಬ್ಧಕ್ಕೆ ಅನುಗುಣವಾಗಿ ವೃಕ್ಷ-ಲತಾದಿ ಸ್ಥಾವರ ಯೋನಿಯನ್ನು ಪಡೆಯುತ್ತಾರೆ. ಅವರಿಗೂ ನಿಯಾಮಕನಾಗಿ ಪರಮಾತ್ಮ ಇರುತ್ತಾನೆ.

ಯ ಏಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಮಾಣಃ ।
ತದೇವ ಶುಕ್ರಂ ತದ್ ಬ್ರಹ್ಮ ತದೇವಾಮೃತಮುಚ್ಯತೇ ।
ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ ವೈ ತತ್ ॥

ಅಂತಸ್ಥನಾದ ಪರಮಾತ್ಮ ಪ್ರಾಣಾದಿನಿಯಾಮಕನಾಗಿದ್ದಾನೆ ಎಂಬ ವಿಷಯವನ್ನು ತಿಳಿಸಿಯಾಯಿತು. ಈಗ ಪರಮಾತ್ಮನ ಮತ್ತೊಂದು ವ್ಯಾಪಾರವನ್ನು ತಿಳಿಸುತ್ತಿದ್ದಾರೆ. ಜೀವಭೇದಕವಾದ ಗುಣಗಳಿಂದ ವಿಶಿಷ್ಟನಾಗಿದ್ದಾನೆ ಪರಮಾತ್ಮ ಎಂಬುದನ್ನು ತಿಳಿಸುತ್ತಾ ಅವನ ಮಹಿಮೆಯನ್ನು ಈ ಮಂತ್ರ ಕೊಂಡಾಡುತ್ತದೆ.

ಜೀವರು ಸ್ವಪ್ನಾವಸ್ಥೆಯಲ್ಲಿರುವಾಗ ಸ್ವಾಪ್ನಪದಾರ್ಥಗಳನ್ನು ತನ್ನ ಇಚ್ಛೆಗೆ ಅನುಗುಣವಾಗಿ ನಿರ್ಮಿಸುತ್ತಾ ಎಚ್ಚರಿಕೆಯಿಂದ ಇರುತ್ತಾನೆ ಪರಮಾತ್ಮ (ಜೀವ ಸ್ವಪ್ನಾವಸ್ಥೆಯಲ್ಲಿರುತ್ತಾನೆ.) ಈ ಪರಮಾತ್ಮ ಶೋಕರಹಿತನಾಗಿದ್ದಾನೆ. (ಜೀವನು ಶೋಕಸಹಿತನಾಗಿದ್ದಾನೆ.) ಆ ಬ್ರಹ್ಮನೇ ಗುಣಪರಿಪೂರ್ಣನಾಗಿದ್ದಾನೆ. (ಜೀವನಲ್ಲ.) ಆ ಪರಮಾತ್ಮನೇ ನಿತ್ಯಮುಕ್ತನಾಗಿದ್ದಾನೆ. (ಜೀವ ಸಂಸಾರಿಯಾಗಿದ್ದುಕೊಂಡು ಸಾಧನೆಯ ಪರಿಪಕ್ವತೆಯಿಂದ ಪರಮಾತ್ಮನ ಪ್ರಸಾದವನ್ನು ಪಡೆದು ಮಕ್ತನಾಗುತ್ತಾನೆ.) ಆ ಭಗವಂತನಲ್ಲಿ ಸಕಲಲೋಕಗಳೂ ಆಶ್ರಿತವಾಗಿವೆ. (ಲೋಕಗಳಿಗೆ ಆಶ್ರಯನಾದವನು ಜೀವನಾಗಲು ಸಾಧ್ಯವಿಲ್ಲ.) ಆ ಪರಮಾತ್ಮನನ್ನು ಪರಿಪೂರ್ಣವಾಗಿ ತಿಳಿಯಲು ಯಾರಿಗೂ ಸಾಧ್ಯವಿಲ್ಲ. (ಆದರೆ ಪರಮಾತ್ಮ ಮಾತ್ರ ಸಕಲ ಜೀವರಾಶಿಗಳನ್ನು ಸರಿಯಾಗಿ ತಿಳಿದುಕೊಂಡಿದ್ದಾನೆ. ಆದ್ದರಿಂದ ಜೀವೇಶ್ವರಭೇದ ಸಿದ್ಧವಾದದ್ದು.) ನೀನು ಕೇಳಿದ ಪರಮಾತ್ಮನ ಸ್ವರೂಪವಿದಾಗಿದೆ.

ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ
ರೂಪಂರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥೨.೨.೯॥

ವಾಯುರ್ಯಥೈಕೋ ಭುವನಂ ಪ್ರವಿಷ್ಟೋ
ರೂಪಂ ರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥೨.೨.೧೦॥

ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುಃ
ನ ಲಿಪ್ಯತೇ ಚಾಕ್ಷುಷೈಃ ಬಾಹ್ಯದೋಷೈಃ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥೨.೨.೧೧॥

"ನ ಪ್ರಾಣೇನ" ಎಂಬ ಮಂತ್ರದಿಂದ ಸರ್ವಜೀವನಿಯಾಮಕತ್ವವನ್ನು ಪರಮಾತ್ಮನಿಗೆ ತಿಳಿಸಿದ್ದಾರೆ. ಅದು ಬುದ್ಧಿಗೆ ಸುಲಭವಾಗಿ ನಿಲುಕಲು ದೃಷ್ಟಾಂತಗಳನ್ನು ಹೇಳುತ್ತಿದ್ದಾರೆ.

ಹಿಂದೆ ತಿಳಿಸಿದ ಜೀವೇಶ್ವರರ ಭೇದವನ್ನೇ ದೃಷ್ಟಾಂತಸಹಿತವಾಗಿ ಎರಡುಮಂತ್ರಗಳಿಂದ ತಿಳಿಸುತ್ತಿದ್ದಾರೆ. ಜಡವಾದ ಅಗ್ನಿಯೇ ಪಾಕಕರ್ತೃವಾಗಿದೆ ಎಂದು ಲೌಕಿಕರಿಗೆ ತೋರುತ್ತದೆ. ಆದರೇ ವಸ್ತುತಃ ಪಾಕಕರ್ತೃವಾದವನು ಅಗ್ನಿದೇವತೆಯು. ಅವನೊಬ್ಬನೇ ಲೋಕವನ್ನೆಲ್ಲ ಪ್ರವೇಶಿಸಿ ಪಾಕಾದಿಕರ್ತೃವಾಗಿದ್ದಾನೆ. ಅಗ್ನಿದೇವತೆಯ ಹೊರತು ಪಾಕಾದಿಕರ್ತೃಗಳಾದವರು ಮತ್ತಾರೂ ಇಲ್ಲ. ಪಾಕಕ್ಕೆ ಅಗತ್ಯವೆಂದು ತೋರುವ ಜಡವಾದ ಅಗ್ನಿ ಎಲ್ಲವೂ ಅಗ್ನಿದೇವತೆಯ ಪ್ರತಿಬಿಂಬವೇ ಆಗಿವೆ. ಅಗ್ನಿದೇವತೆಯ ಅಧೀನವಾಗಿ ಪಾಕಕರ್ತೃವಾಗಿದೆ.

ಹೀಗೆ ಪರಮಾತ್ಮನೊಬ್ಬನೇ ಸಕಲಜೀವರಾಶಿಗಳಿಗೆ ಅಂತರ್ಯಾಮಿಯಾಗಿದ್ದಾನೆ. ಸಕಲ ಜೀವರಾಶಿಗಳೂ ಭಗವಂತನಿಗೆ ಪ್ರತಿಬಿಂಬರೇ ಆಗಿದ್ದಾರೆ. ಇಲ್ಲಿ ನಿರೂಪಿಸಿದ ಬಿಂಬ-ಪ್ರತಿಬಿಂಬಭಾವದಿಂದ ಐಕ್ಯವನ್ನು ಹೇಳುವದು ಸಂಗತವಾಗಲಾರದು. ಯಾಕೆಂದರೆ ಪ್ರತಿಬಿಂಬವು ಬಿಂಬಕ್ಕೆ ಸದೃಶವಾಗಿರುತ್ತದೆ. ಬಿಂಬಕ್ಕೆ ಅಧೀನವಾಗಿರುತ್ತದೆ. ಹಾಗೆ ಎಲ್ಲಜೀವರಾಶಿಗಳು ಬಿಂಬನಾದ ಪರಮಾತ್ಮನಿಗೆ ಜ್ಞಾನಾನಂದಾದಿಗುಣಗಳಿಂದ ಸದೃಶರಾಗಿದ್ದಾರೆ. ಮತ್ತು ಪ್ರತಿಯೊಂದು ವಿಷಯದಲ್ಲಿಯೂ ಪರಮಾತ್ಮನಿಗೆ ಅಧೀನ- ರಾಗಿರುತ್ತಾರೆ. ಆದ್ದರಿಂದ ಜೀವರು ಪರಮಾತ್ಮನಿಂದ ಅಭಿನ್ನರಲ್ಲ. ಕಿಂತು ಸದಾ ಭಿನ್ನರೆ ಆಗಿದ್ದಾರೆ. ॥೨.೨.೯॥

ವಾಯುದೇವನು ಒಬ್ಬನೇ ಸಕಲಲೋಕಗಳನ್ನು ಪ್ರವೇಶಿಸಿ ಧಾರಕನಾಗಿದ್ದಾನೆ. ವಾಯುವಿನ ಹೊರತು ಧಾರಕರಾದವರು ಮತ್ತಾರೂ ಇಲ್ಲ. ಸ್ಪರ್ಶದಿಂದ ಅನುಮೇಯವಾದ, ಜಡವಾದ ವಾಯುಗಳೆಲ್ಲ ಈ ವಾಯುದೇವನ ಪ್ರತಿಬಿಂಬಗಳಾಗಿವೆ. ಹೀಗೆಯೇ ಸಕಲಪ್ರಾಣಿಗಳಿಗೆ ಅಂತರ್ಯಾಮಿಯಾಗಿರುವ ಪರಮಾತ್ಮ ಒಬ್ಬನೇ ಆಗಿದ್ದಾನೆ. ಅವನು ಸ್ವತಂತ್ರನಾಗಿದ್ದಾನೆ. ಪರಮಾತ್ಮನ ಹೊರತು ಜೀವರಿಗೆ ಅಂತರ್ಯಾಮಿಯಾಗಿದ್ದವರು

ಮತ್ತೊಬ್ಬನಿಲ್ಲ. ಆದರೆ ಜೀವರೆಲ್ಲರೂ ಪರಮಾತ್ಮನ ರೂಪಗಳಿಗೆ ಪ್ರತಿಬಿಂಬರಾಗಿದ್ದಾರೆ. ಯಾವರೀತಿಯಿಂದಲೂ ಜೀವರು ಪರಮಾತ್ಮನಿಂದ ಅಭಿನ್ನರಾಗಲು ಸಾಧ್ಯವಿಲ್ಲ. ಅನಾದಿಕಾಲದಿಂದಲೂ ಅನಂತಜೀವರಾಶಿಗಳು ಪರಮಾತ್ಮನಿಗೆ ಸದೃಶರಾಗಿದ್ದಾರೆ. ಪರಮಾತ್ಮನಿಂದ ಅತ್ಯಂತ ವಿಲಕ್ಷಣರಾಗಿದ್ದಾರೆ. ಸಕಲಶ್ರುತಿಸ್ಮೃತಿಗಳಿಂದ ಸಿದ್ಧವಾದ ವಿಷಯವಿದಾಗಿದೆ. ॥೨.೨.೧೦॥

''ಸರ್ವಭೂತಾಂತರಾತ್ಮಾ'' ಎಂಬುದರಿಂದ ಸರ್ವಜೀವರ ಅಂತರ್ಯಾಮಿತ್ವವು ಪ್ರತಿಪಾದಿತವಾಗಿದೆ. ಹಾಗಾದರೆ ಜೀವರಂತೆ ಪರಮಾತ್ಮನಿಗೂ ದುಃಖವು ಪ್ರಸಕ್ತವಾಗುತ್ತದೆ ಎಂಬ ಶಂಕೆಯನ್ನು ''ಸೂರ್ಯೋ ಯಥಾ'' ಎಂಬ ಮಂತ್ರವು ಪರಿಹರಿಸುತ್ತದೆ.

ಸೂರ್ಯದೇವತೆಯು ಎಲ್ಲಜೀವರಾಶಿಗಳ ಚಕ್ಷುರಿಂದ್ರಿಯಕ್ಕೆ ಅಭಿಮಾನಿಯಾಗಿದ್ದಾನೆ. ಆದ್ದರಿಂದ ಸೂರ್ಯ ''ಆಂತರಚಕ್ಷು'' ಎನಿಸಿಕೊಳ್ಳುತ್ತಾನೆ. ಬಾಹ್ಯವಾದ ಚಕ್ಷುರಿಂದ್ರಿಯ ಈ ಸೂರ್ಯನ ಪ್ರತಿಬಿಂಬವಾಗಿದೆ. ಅಚೇತನರೂಪವಾದ ಬಾಹ್ಯಚಕ್ಷುರ್ಗತವಾದ ದೋಷಗಳಿಂದ ಆಂತರಚಕ್ಷುವಾದ ಸೂರ್ಯನು ಲಿಪ್ತನಾಗುವದಿಲ್ಲ. ಹೀಗೆಯೇ ಸರ್ವಜೀವರಾಶಿಗಳಿಗೆ ಒಬ್ಬನೇ ಪರಮಾತ್ಮ ಅಂತರ್ಯಾಮಿಯಾಗಿದ್ದರೂ ತನಗೆ ಪ್ರತಿಬಿಂಬರಾದ ಜೀವರ ದುಃಖಾದಿದೋಷಗಳಿಂದ ಲಿಪ್ತನಾಗುವುದಿಲ್ಲ. ಪರಮಾತ್ಮ ಸ್ವತಂತ್ರನಾಗಿದ್ದಾನೆ. ಆದ್ದರಿಂದ ಜೀವರಿಂದ ಅತ್ಯಂತ ಭಿನ್ನನಾಗಿದ್ದಾನೆ. ಆದ್ದರಿಂದ ದುಃಖಾಲೇಪವು ಯುಕ್ತವೇ ಆಗಿದೆ.

ಏಕೋ ವಶೀ ಸರ್ವಭೂತಾಂತರಾತ್ಮಾ
ಏಕಂ ರೂಪಂ ಬಹುಧಾ ಯಃ ಕರೋತಿ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ-
ಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥೨.೨.೧೨॥

ಎಲ್ಲಜೀವರ ಅಂತರ್ಯಾಮಿಯಾದವನು ಜೀವನ ದುಃಖದಿಂದ ಲಿಪ್ತನಾಗದೇ ಇರುವದು ಹೇಗೆ ಸಾಧ್ಯ ? ಸಾಧ್ಯವಾಗುವದಾದರೆ ಜೀವನಿಗೂ ದುಃಖದ ಲೇಪವಾಗಬಾರದು. ಸುಡುತ್ತಿರುವ ಮನೆಯ ಒಳಗೆ ಇಬ್ಬರು ವ್ಯಕ್ತಿಗಳಿದ್ದಾರೆ. ಒಬ್ಬನಿಗೆ ದಾಹವಾಗುತ್ತಿದೆ, ಮತ್ತೊಬ್ಬನಿಗೆ ದಾಹವಾಗುತ್ತಿಲ್ಲ ಎಂದು ಹೇಳುವದು ಸರಿಯಾಗುವುದಿಲ್ಲ. ಎಂದು ಶಂಕಿಸುವವರಿಗೆ ಉತ್ತರವನ್ನು ಈ ಮಂತ್ರವು ಹೇಳುತ್ತದೆ.

ಜೀವಾಪೇಕ್ಷಯಾ ಈಶ್ವರನ ಸಾಮರ್ಥ್ಯವು ಅನಂತವಾಗಿದೆ. ಇದನ್ನು ಮೊದಲು ತಿಳಿಯಬೇಕು. ಅಗ್ನಿಸ್ತಂಭನವಿದ್ಯೆಯಿಂದ ಯುಕ್ತನಾದವನಿಗೆ ಅಗ್ನಿಯಲ್ಲಿದ್ದರೂ ದಾಹವಾಗುವುದಿಲ್ಲ. ಹಾಗೆಯೇ ಸಮರ್ಥನಾದದ್ದರಿಂದ ಜೀವಾಂತರ್ಗತನಾಗಿದ್ದರೂ ಪರಮಾತ್ಮನಿಗೆ ದುಃಖದ ಲೇಪವಿರುವದಿಲ್ಲ ಎಂಬ ಭಾವನೆಯಿಂದ ಪರಮಾತ್ಮನ ಸಾಮರ್ಥ್ಯವನ್ನು ಈ ಮಂತ್ರವು ತಿಳಿಸುತ್ತದೆ.

ಪರಮಾತ್ಮನು ಸಕಲಜೀವರ ಅಂತರ್ಯಾಮಿಯಾಗಿದ್ದಾನೆ. ಸಮಾಭ್ಯಧಿಕರಹಿತ-ನಾಗಿದ್ದಾನೆ. ಎಲ್ಲವೂ ಪರಮಾತ್ಮನ ವಶದಲ್ಲಿಯೇ ಇದೆ. ತನಗೆ ವಶವಾಗದ ಪದಾರ್ಥವೇ ಪ್ರಪಂಚದಲ್ಲಿ ಇಲ್ಲ. ಒಬ್ಬನೇ ಆದ ಪರಮಾತ್ಮನಿಗೆ ಅನಂತಜೀವನಿಯಾಮಕತ್ವವು ಹೇಗೆ ಯುಕ್ತವೆಂದು ಸಂದೇಹಿಸಬಾರದು. ಅಸಂಖ್ಯವಾದ ಪ್ರಪಂಚವನ್ನು ನಿಯಮನ ಮಾಡಲು ಪರಮಾತ್ಮ ಅನಂತವಾದ ರೂಪಗಳನ್ನು ಸ್ವೀಕರಿಸುತ್ತಾನೆ. ಹೀಗೆ ನಿಯಾಮಕತಯಾ ಜೀವಗತನಾದ ಆ ಪರಮಾತ್ಮನನ್ನು ಯಾರು ಯಥಾರ್ಥವಾಗಿ ತಿಳಿಯುತ್ತಾರೋ ಅವರಿಗೆ ಮಾತ್ರ ಶಾಶ್ವತವಾದ ಸುಖವು ದೊರೆಯುತ್ತದೆ. ॥೨.೩.೧೨॥

ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ
ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ-
ಸ್ತೇಷಾಂ ಶಾಂತಿಃ ಶಾಶ್ವತಂ ನೇತರೇಷಾಮ್ ॥೨.೨.೧೩॥

ಇಲ್ಲಿಯವರೆಗೆ ಅನೇಕರೂಪತ್ವೋಪಾಸನೆಯನ್ನು ತಿಳಿಸಿಯಾಯಿತು. ಇನ್ನು ಮೇಲೆ ಸರ್ವಕಾಮಪ್ರದತ್ವೋಪಾಸನೆಯನ್ನು ಮಾಡಬೇಕೆಂದು ಆ ವಿಷಯವನ್ನು ಯಮದೇವರು ತಿಳಿಸುತ್ತಿದ್ದಾರೆ. ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ ಅಪೂರ್ಣತ್ವರೂಪವಾದ ಚತುರ್ವಿಧ-ನಾಶಶೂನ್ಯನಾದುದರಿಂದ ನಿತ್ಯಾನಾಂ ನಿತ್ಯನಾಗಿದ್ದಾನೆ ಪರಮಾತ್ಮ ಅಥವಾ ನಿತ್ಯವಾದ ಪದಾರ್ಥಗಳ ನಿತ್ಯತ್ವವನ್ನು ನಿಯಮಿಸುತ್ತಾನೆ ಪರಮಾತ್ಮ. ಜೀವನು ಅತ್ಯಲ್ಪಚೇತನನಾಗಿದ್ದಾನೆ. ಸ್ವತಂತ್ರನಾದದ್ದರಿಂದ ಪರಮಾತ್ಮ ಪರಮಚೇತನನಾಗಿದ್ದಾನೆ. ಅಥವಾ ಚೇತನರಿಗೆ ಚೈತನ್ಯವನ್ನು ನೀಡುವವನಾಗಿದ್ದಾನೆ. ಪರಮಾತ್ಮ ತಾನು ಒಬ್ಬನೇ ಆಗಿದ್ದರೂ ಅನೇಕಜೀವರಾಶಿಗಳ ಕಾಮನೆಗಳನ್ನು ಪೂರ್ಣಗೊಳಿಸುತ್ತಾನೆ. ಇಂತಹ ಪರಮಾತ್ಮನನ್ನು ತಮ್ಮೊಳಗೆ ಯಾವ ಜ್ಞಾನಿಗಳು ಕಾಣುತ್ತಾರೋ ಅವರಿಗೆ ಮಾತ್ರ ಪುನರಾವೃತ್ತಿಶೂನ್ಯವಾದ ಶಾಂತಿಯು ದೊರೆಯುತ್ತದೆ. ಉಳಿದವರಿಗೆ ಈ ಶಾಂತಿಯ ಸಂಪ್ರಾಪ್ತಿಯಾಗುವದಿಲ್ಲ. ॥೨.೨.೧೩॥

ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ ।
ಕಥಂ ನು ತದ್ ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ ॥೨.೨.೧೪॥

ಯಾವ ಪರಮಾತ್ಮನ ಜ್ಞಾನದಿಂದ ಶಾಶ್ವತಸುಖರೂಪವಾದ ಮುಕ್ತಿಯು ಪ್ರಾಪ್ತವಾಗುವುದೋ ಅಂತಹ ಪರಮಾತ್ಮನಿಗೆ ದುಃಖಲೇಪ ಅಸಂಭಾವಿತ ಎಂಬುದನ್ನು ತಿಳಿಸಿಯಾಯಿತು. ಈಗ ಪರಮಸುಖರೂಪನಾದದ್ದರಿಂದ ಪರಮಾತ್ಮನಿಗೆ ದುಃಖಪ್ರಾಪ್ತಿ ಸರ್ವಥಾ ಇರುವದಿಲ್ಲ ಎಂಬ ಭಾವನೆಯಿಂದ ಪ್ರಕೃತವಾದ ಭಗವಂತನ ಸ್ವರೂಪವನ್ನೇ ತಿಳಿಸಲು ಈ ಮಂತ್ರ ಪ್ರವೃತ್ತವಾಗಿದೆ.

ಪರಮಾತ್ಮನ ಸ್ವರೂಪವು ಹೀಗೆಯೇ ಇದೆ ಎಂದು ತಿಳಿಯಲು, ತಿಳಿಸಲು ಅಸಾಧ್ಯವಾಗಿದೆ. ಅವನು ಪರಮಸುಖಸ್ವರೂಪನಾಗಿದ್ದಾನೆ ಎಂದು ಜ್ಞಾನಿಗಳು ಹೇಳುತ್ತಾರೆ.

ಪರಮಾತ್ಮನ ಜ್ಞಾನವಿದು ಅವನ ಅನುಗ್ರಹದಿಂದಲೇ ಪ್ರಾಪ್ತವಾಗುತ್ತದೆ. ಈ ವಿಷಯದಲ್ಲಿ ನನ್ನ ಅನುಭವವೇ ಪ್ರಮಾಣವಾಗಿದೆ. ದೇವರ ಅನುಗ್ರಹವಿಲ್ಲದೇ ನಾನಾದರೂ ಹೇಗೆ ಪರಮಾತ್ಮನ ಸ್ವರೂಪವನ್ನು ತಿಳಿಯಲು ಸಾಧ್ಯ. ಯಾವರೀತಿಯಿಂದಲೂ ಇದು ಸಾಧ್ಯವಿಲ್ಲ.

ಪರಮಾತ್ಮನ ಪ್ರಸಾದದಿಂದ ಅವನನ್ನು ಪರಿಪೂರ್ಣವಾಗಿ ತಿಳಿಯಲು ಸಾಧ್ಯವೇ ? ಎಂಬ ನಚಿಕೇತನ ಪ್ರಶ್ನೆಗೆ ಅದು ಸರ್ವಥಾ ಸಾಧ್ಯವಿಲ್ಲವೆಂದು ಯಮದೇವರು ಉತ್ತರವನ್ನು ತಿಳಿಸುತ್ತಾರೆ. ॥೨.೩.೧೪॥

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥೨.೨.೧೫॥

ಪರಮಾತ್ಮ ಪರಮಸುಖಸ್ವರೂಪನಾಗಿದ್ದಾನೆ. ಪರಂಜ್ಯೋತಿರೂಪನೂ ಆಗಿದ್ದಾನೆ ಎಂದು ತಿಳಿಯಬೇಕೆಂಬುದಾಗಿ ಈ ಮಂತ್ರ ತಿಳಿಸುತ್ತದೆ.

ಪರಬ್ರಹ್ಮನನ್ನು ಪ್ರಕಾಶಗೊಳಿಸಲು ಸೂರ್ಯನಿಗೆ ಸಾಮರ್ಥ್ಯವಿರುವುದಿಲ್ಲ. ಚಂದ್ರನಾಗಲೀ, ನಕ್ಷತ್ರಗಳಾಗಲೀ ಪರಮಾತ್ಮನನ್ನು ಪ್ರಕಾಶಗೊಳಿಸಲಾರವು. ವಿದ್ಯುತ್ತುಗಳು ಕೂಡಾ ಪರಮಾತ್ಮಪ್ರಕಾಶಕವಾಗುವುದಿಲ್ಲ. ಅಗ್ನಿಗೆ ಕೂಡಾ ಈ ಸಾಮರ್ಥ್ಯವಿರುವುದಿಲ್ಲ. ಸ್ವತಂತ್ರನಾದ ಪರಮಾತ್ಮನ ಪ್ರಕಾಶದಿಂದಲೇ ಈ ಸಮಸ್ತಪ್ರಪಂಚವು ಪ್ರಕಾಶಿತವಾಗುತ್ತದೆ. ಈ ಲೋಕದಲ್ಲಿ ಸೂರ್ಯನು ಪ್ರಕಾಶಿಸುತ್ತಿರುವಾಗ ಖದ್ಯೋತವು (ಮಿಂಚಿನಹುಳ) ಹೇಗೆ ಪ್ರಕಾಶಿಸಲಾರದೋ ಹಾಗೆ ಪರಂಜ್ಯೋತಿಸ್ವರೂಪನಾದ ಪರಮಾತ್ಮನು ಬೆಳಗುತ್ತಿರುವಾಗ ಸೂರ್ಯಾದಿಗಳು ಕೂಡಾ ಪ್ರಕಾಶಿಸಲಾರವು. ಪರಮಾತ್ಮನ ಪ್ರಕಾಶದಿಂದಲೇ ಜಗತ್ತಿನಲ್ಲಿ ಎಲ್ಲವೂ ಪ್ರಕಾಶಿತವಾಗುತ್ತವೆ.

ಭಗವತ್ಸ್ವರೂಪಪ್ರಕಾಶಕತ್ವ ಸೂರ್ಯಾದಿಗಳಿಗೆ ಇರುವುದಿಲ್ಲ. ಈ ವಿಷಯದಲ್ಲಿ ಸಂದೇಹವಿಲ್ಲ. ಇದು ಮಾತ್ರವಲ್ಲ. ಘಟಾದಿಗಳನ್ನು ಪ್ರಕಾಶಗೊಳಿಸುವ ಸ್ವಾತಂತ್ರ್ಯವೂ ಸೂರ್ಯಾದಿಗಳಿಗೆ ಇರುವದಿಲ್ಲ. ಸ್ವಯಂ ಪ್ರಕಾಶಮಾನವಾದ ಪರಮಾತ್ಮನ ತೇಜಸ್ಸನ್ನು ಅನುಸರಿಸಿಯೇ ಸೂರ್ಯಾದಿಗಳು ಪ್ರಕಾಶಮಾನರಾಗುತ್ತಾರೆ. ಹೀಗಾಗಿ ಸೂರ್ಯಾದಿಗಳ ಪ್ರಕಾಶವೂ ಭಗವಂತನ ಅಧೀನವಾಗಿದೆ. ಹೀಗೆ ಪರಮಾತ್ಮನನ್ನು ತಿಳಿಸಲು ಯಾರೂ ಸಮರ್ಥರಾಗಿಲ್ಲವಾದ್ದರಿಂದ ದೇವರ ಪ್ರಸಾದದಿಂದಲೇ ತಮ್ಮ ತಮ್ಮ ಸಾಧನೆಗೆ ಹಾಗು ಯೋಗ್ಯತೆಗೆ ಅನುಗುಣವಾಗಿ ಪರಮಾತ್ಮನು ಜ್ಞೇಯನಾಗಿದ್ದಾನೆ. ಎಂಬುದನ್ನು ತಿಳಿಯಬೇಕು.

॥ ಇತಿ ದ್ವಿತೀಯೇಽಧ್ಯಾಯೇ ದ್ವಿತೀಯಾ ವಲ್ಲೀ ॥

## ॥ ಅಥ ಶ್ರೀಕಾಠಕಭಾಷ್ಯೇ ದ್ವಿತೀಯೇಽಧ್ಯಾಯೇ ತೃತೀಯಾ ವಲ್ಲೀ ॥

ಊರ್ಧ್ವಮೂಲೋಽವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ ।
ತದೇವ ಶುಕ್ರಂ ತದ್ ಬ್ರಹ್ಮ ತದೇವಾಮೃತಮುಚ್ಯತೇ ।
ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ ವೈ ತತ್ ॥

ಶ್ರೀಹರಿ ಸರ್ವೋತ್ತಮನಾಗಿದ್ದಾನೆ. ಎಲ್ಲ ಜಗತ್ತಿಗೆ ಮೂಲಾಶ್ರಯನಾಗಿದ್ದಾನೆ. ಮೂಲಕಾರಣನಾಗಿದ್ದಾನೆ ಎಂಬುದಾಗಿ ಚಿಂತಿಸಬೇಕು. ಹೀಗೆ ಅನೇಕ ವಿಷಯಗಳನ್ನು ಯಮದೇವರು ಉಪದೇಶ ಮಾಡಿದರು. ನಚಿಕೇತನ ಮುಖವನ್ನು ನೋಡಿದರು. ಆ ಮುಖದಲ್ಲಿ ಸಾಕು ಎಂಬ ಭಾವನೆ ಇರಲಿಲ್ಲ. ಮತ್ತಿಷ್ಟು ಲವಲವಿಕೆ ಇತ್ತು. ಯಮದೇವರು ಸಂತುಷ್ಟರಾದರು. ಮತ್ತಿಷ್ಟು ವಿಶೇಷವಾದ ವಿಷಯಗಳನ್ನು ನಚಿಕೇತನಿಗೆ ಉಪದೇಶಿಸುತ್ತಿದ್ದಾರೆ. ಪ್ರಕೃತ ಈ ಮಂತ್ರದ ಅರ್ಥ ಯಥಾರ್ಥವಾಗಿ ಆಗುವದಿಲ್ಲ. ಆದ್ದರಿಂದ ಶ್ರೀಮದಾಚಾರ್ಯರ ಭಾಷ್ಯಕ್ಕೆ ಅನುಗುಣವಾಗಿ ಇದನ್ನು ತಿಳಿಯಬೇಕು.

ಊರ್ಧ್ವ- ಸರ್ವೋತ್ತಮನಾದ ಭಗವಂತ ಮೂಲ-ಆಶ್ರಯನಾಗಿದ್ದಾನೆ. ಆದ್ದರಿಂದ ಪರಮಾತ್ಮ ಊರ್ಧ್ವಮೂಲ. ಸಕಲವೃಕ್ಷಗಳಿಗೂ ಭೂಮಿಯು ಆಶ್ರಯವಾಗಿದೆ. ಹಾಗೆ ಸಮಗ್ರಜಗತ್ತಿಗೆ ಭಗವಂತ ಆಶ್ರಯನಾಗಿದ್ದಾನೆ. ಹೀಗಾಗಿ ಭಗವಂತ ಮೂಲಾಶ್ರಯ. ಸರ್ವೋತ್ತಮನಾದ, ಮುಖ್ಯತಃ ಅನಾದಿನಿತ್ಯನಾದ ಭಗವಂತ ಪ್ರವಾಹತಃ ಅನಾದಿನಿತ್ಯವಾದ ಜಗತ್ತಿಗೆ ಮೂಲಾಶ್ರಯನಾಗಿದ್ದಾನೆ.

ಊರ್ಧ್ವ-ಸರ್ವಸ್ತ್ರೀಯರಲ್ಲಿ ಉತ್ತಮಳಾದ, ಬ್ರಹ್ಮಾದಿಸಕಲರಿಗೂ ಉತ್ತಮಳಾಗಿರುವ ಲಕ್ಷ್ಮೀದೇವಿಯು ಮೂಲ-ವೃಕ್ಷಕ್ಕೆ ಆಧಾರವಾದ ಆಲವಾಲದಂತೆ ಆಶ್ರಯಳಾಗಿದ್ದಾಳೆ ಮತ್ತು ಬೀಜದಂತೆ ಪರಿಣಾಮಿಕಾರಣವಾದ ಪ್ರಕೃತಿಗೆ ಅಭಿಮಾನಿನಿಯಾಗಿದ್ದಾಳೆ ಆದ್ದರಿಂದ ಊರ್ಧ್ವಮೂಲಳಾಗಿದ್ದಾಳೆ.

ರಮಾದೇವಿಗಿಂತಲೂ ಅಧಮರಾದ ಬ್ರಹ್ಮಾದಿದೇವತೆಗಳು ಈ ವೃಕ್ಷಕ್ಕೆ ಶಾಖಾರೂಪರಾಗಿದ್ದಾರೆ. ಈ ವೃಕ್ಷಸಾಮ್ಯವನ್ನು ಹೇಳುವ ಪ್ರಸಂಗವಿದ್ದಾಗ ಅಶ್ವತ್ಥವೆಂಬ ವೃಕ್ಷವಿಶೇಷಶಬ್ದವನ್ನು ಪರಿಗ್ರಹಿಸಿರುವುದಕ್ಕೆ ಈ ರೀತಿ ಕಾರಣವನ್ನು ತಿಳಿಯಬೇಕು. ಆಶು-ಶೀಘ್ರವಾದ ವ-ಗತಿ ಉಳ್ಳವನಾಗಿದ್ದಾನೆ. ಆದ್ದರಿಂದ ಪರಮಾತ್ಮ ಅಶ್ವ. ಇಂತಹ ಪರಮಾತ್ಮ ತಿಷ್ಠತಿ-ಈ ಜಗತ್ತಿನಲ್ಲಿ ವ್ಯಾಪ್ತನಾಗಿದ್ದಾನೆ ಆದ್ದರಿಂದ ಈ ಜಗತ್ತು ಅಶ್ವತ್ಥನಾಮಕವಾಗಿದೆ. ಅಥವಾ ಪ್ರಲಯಕಾಲದಲ್ಲಿ ಈ ಸಮಗ್ರ ಜಗತ್ತು ಅಶ್ವನಾಮಕನಾದ ಶ್ರೀಹರಿಗೆ ಥ-ಅನ್ನವಾಗಿರುತ್ತದೆ ಆದ್ದರಿಂದ ಜಗತ್ತು ಅಶ್ವತ್ಥವೆನಿಸುತ್ತದೆ. ಇಂತಹ ಅಶ್ವತ್ಥಕ್ಕೆ ಮೂಲಾಧಾರನಾದ ಪರಮಾತ್ಮ ಶೋಕರಹಿತನಾಗಿದ್ದಾನೆ. ಗುಣಪರಿಪೂರ್ಣನಾಗಿದ್ದಾನೆ. ಈ ಎಲ್ಲ ಪ್ರಮೇಯಗಳನ್ನು ತಿಳಿಸಲು ಅಶ್ವತ್ಥವೃಕ್ಷದ ಸಾಮ್ಯವನ್ನು ಉಪನಿಷತ್ತು ಹೇಳಿದೆ. ॥೨.೩.೧॥

**ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಮ್ ।**
**ಮಹದ್ಭಯಂ ವಜ್ರಮುದ್ಯತಂ ಯ ಏತದ್ ವಿದುರಮೃತಾಸ್ತೇ ಭವಂತಿ ॥**

ಪ್ರ-ಪ್ರಕೃಷ್ಟವಾಗಿ ಅಣ-ಚೇಷ್ಟಕನಾಗಿದ್ದಾನೆ. ಸರ್ವಪ್ರೇರಕನಾದುದರಿಂದ ಪರಮಾತ್ಮ ಪ್ರಾಣನಾಮಕನಾಗಿದ್ದಾನೆ. ಈ ಪ್ರಾಣನಾಮಕನಾದ ಪರಮಾತ್ಮನಿಂದಲೇ ಸಮಗ್ರಪ್ರಪಂಚವೆಲ್ಲ ಉತ್ಪನ್ನವಾಗಿದೆ. ಸ್ವವಿಹಿತವಾದ ಕರ್ತವ್ಯಕರ್ಮಗಳನ್ನು ಆಚರಿಸದವರು ಈ ಪರಮಾತ್ಮನಿಂದ ಭಯವನ್ನು ಹೊಂದುತ್ತಾರೆ. ಸ್ವವಿಹಿತಕರ್ತವ್ಯಗಳನ್ನು ಪರಿತ್ಯಜಿಸಿದವರಿಗೆ, ಶಿಕ್ಷಿಸಲು ಪ್ರವೃತ್ತವಾದ ವಜ್ರಾಯುಧದಂತೆ ಭಯಪ್ರದನಾಗಿದ್ದಾನೆ ಪರಮಾತ್ಮ. ಪರಮಾತ್ಮನ ಈ ಮಹಿಮೆಯನ್ನು ತಿಳಿದು ಸ್ವವಿಹಿತವಾದ ಧರ್ಮಗಳನ್ನು ಶ್ರದ್ಧೆಯಿಂದ ಅನುಷ್ಠಾನಮಾಡುವವರು ಮುಕ್ತರಾಗುತ್ತಾರೆ. ಆದ್ದರಿಂದ ವಜ್ರವೆಂದರೆ ವಜ್ರಾಯುಧವೆಂದು ಅರ್ಥವಲ್ಲ. ವಜ್ರಾಯುಧದ ಜ್ಞಾನದಿಂದ ಯಾರಿಗೂ ಮುಕ್ತಿಯಾಗುವದಿಲ್ಲ. ಕಿಂತು ವಜ್ರದಂತೆ ಭಯಂಕರನಾದ ಪರಮಾತ್ಮ ಎಂದು ಅರ್ಥ. ॥೨.೩.೨॥

**ಭಯಾದಸ್ಯಾಗ್ನಿಸ್ತಪತಿ ಭಯಾತ್ ತಪತಿ ಸೂರ್ಯಃ ।**
**ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥೨.೩.೩॥**

ಭಗವಂತನ ಭಯಪ್ರದತ್ವವೆಂಬ ಗುಣವನ್ನೇ ಈ ಮಂತ್ರವು ವಿಶೇಷವಾಗಿ ತಿಳಿಸುತ್ತದೆ. ಪರಮಾತ್ಮನ ಭಯದಿಂದಲೇ ಅಗ್ನಿಯು ದಹಿಸುವ ಕಾರ್ಯದಲ್ಲಿ ನಿಮಗ್ನನಾಗುತ್ತಾನೆ. ಇವನ ಭಯದಿಂದಲೇ ಸೂರ್ಯನು ಪ್ರಕಾಶಕನಾಗುತ್ತಾನೆ. ಇಂದ್ರನು ಕೂಡಾ ಪರಮಾತ್ಮನ ಭಯದಿಂದಲೇ ಮಳೆಯನ್ನು ಸುರಿಸುತ್ತಾನೆ. ಐದನೆಯವನಾದ ಯಮನು ಈ ಪರಮಾತ್ಮನ ಭಯದಿಂದಲೇ ಪಾಪಿಗಳ ಶಿಕ್ಷಣೆಯಲ್ಲಿ ತೊಡಗುತ್ತಾನೆ. ॥೨.೩.೩॥

**ಇಹ ಚೇದಶಕದ್ ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ ।**
**ತತಃ ಸ್ವರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥೨.೩.೪॥**

ಮನುಷ್ಯಜನ್ಮ ಬಂದಾಗಲೇ ಭಗವಂತನ ಜ್ಞಾನವನ್ನು ಸಂಪಾದಿಸಬೇಕು. ಅನ್ಯಯೋನಿಯಲ್ಲಿ ಭಗವಂತನ ತತ್ತ್ವಜ್ಞಾನವನ್ನು ಸಂಪಾದಿಸುವುದು ಸಾಧ್ಯವಿಲ್ಲ. ಇದನ್ನು ತಿಳಿದು ಬಾಲ್ಯಾವಸ್ಥೆಯಲ್ಲಿಯೇ ಅತಿಶೀಘ್ರವಾಗಿ ಜ್ಞಾನವನ್ನು ಸಂಪಾದಿಸಿದ್ದಾನೆ ನಚಿಕೇತ. ಅವನನ್ನು ನೋಡಿ ವಿಸ್ಮಿತರಾಗಿ ಸಾಧಕರಾದವರು ಕೂಡಾ ಹೀಗೆಯೇ ತತ್ತ್ವಜ್ಞಾನವನ್ನು ಸಂಪಾದಿಸಲು ಪ್ರವೃತ್ತರಾಗಬೇಕು. ಈ ವಿಷಯವನ್ನು ತಿಳಿಸುತ್ತಾ ಜ್ಞಾನದ ಫಲವನ್ನು ಈ ಮಂತ್ರ ತಿಳಿಸುತ್ತದೆ.

ಮನುಷ್ಯಜನ್ಮ ಬಂದಾಗಲೇ, ಈ ಶರೀರ ಜೀರ್ಣವಾಗುವದಕ್ಕಿಂತಲೂ ಮೊದಲಿಗೆ ತತ್ತ್ವಜ್ಞಾನವನ್ನು ಸಂಪಾದಿಸಲು ಸಾಧಕನು ಪ್ರವೃತ್ತನಾಗಬೇಕು. ಹೀಗೆ ಮಾಡಲು ಜೀವನು ಸಮರ್ಥನಾದರೆ ಸ್ವ-ಸ್ವರೂಪಭೂತವಾದ, ರ-ಸುಖ, ಗ-ಜ್ಞಾನ ಇದರ ಅಭಿವ್ಯಕ್ತಿಗೆ

ಯೋಗ್ಯಸ್ಥಳಗಳಾದದ್ದರಿಂದ ಸ್ವರ್ಗಶಬ್ದಿತವಾದ ಶ್ವೇತದ್ವೀಪ-ಅನಂತಾಸನ-ವೈಕುಂಠಗಳಲ್ಲಿ ಚಿನ್ಮಯವಾದ ಶರೀರವನ್ನು ಪಡೆಯಲು ಸಮರ್ಥನಾಗುತ್ತಾನೆ. ಆದ್ದರಿಂದ ಶರೀರಪಾತಕ್ಕಿಂತಲೂ ಪೂರ್ವದಲ್ಲಿಯೇ ತತ್ತ್ವಜ್ಞಾನವನ್ನು ಸಂಪಾದಿಸಬೇಕು. ॥೨.೩.೪॥

ಯಥಾಽದರ್ಶೇ ತಥಾತ್ಮನಿ ಯಥಾ ಸ್ವಪ್ನೇ ತಥಾ ಪಿತೃಲೋಕೇ ।
ಯಥಾಪ್ಸು ಪರೀವ ದೃಶ್ಯತೇ ತಥಾ ಗಂಧರ್ವಲೋಕೇ ।
ಛಾಯಾತಪಯೋರಿವ ಬ್ರಹ್ಮಲೋಕೇ ॥೨.೩.೫॥

ಎಲ್ಲರಿಗೂ ಏಕಪ್ರಕಾರವಾದ ಬೋಧವಿರುವದಿಲ್ಲ. ಜ್ಞಾನದಲ್ಲಿ ಅನೇಕಪ್ರಕಾರತೆ ಇದೆ ಅದನ್ನು ತಿಳಿಸಲು ಈ ಮಂತ್ರ ಪ್ರವೃತ್ತವಾಗಿದೆ.

ಜೀವನಲ್ಲಿ ಇರುವ ಪರಮಾತ್ಮ ಕನ್ನಡಿಯಲ್ಲಿ ಮುಖವು ಸ್ಪಷ್ಟವಾಗಿ ತೊರುವಂತೆ ಜ್ಞಾನಿಗಳಾದ ಋಷಿಗಳಿಗೆ ತೊರುತ್ತಾನೆ. ಸ್ವಪ್ನದಲ್ಲಿ ಘಟಾದಿಗಳು ತೋರುವಂತೆ ಅಲ್ಪಾಭಿವ್ಯಕ್ತಿಯುಕ್ತನಾಗಿ ಪಿತೃಲೋಕದಲ್ಲಿ ಪಿತೃಗಳಿಗೆ ತೋರುತ್ತಾನೆ. ಸ್ವಪ್ನದಲ್ಲಿ ತೋರುವ ಪದಾರ್ಥಗಳಿಗಿಂತಲೂ ಕಿಂಚಿದಧಿಕಸ್ಪಷ್ಟವಾಗಿ ಸ್ವಚ್ಛವಾದ ನೀರಿನಲ್ಲಿರುವ ಕಲ್ಲು ಮೊದಲಾದವುಗಳು ಕಾಣುವಂತೆ ಗಂಧರ್ವಲೋಕದಲ್ಲಿ ಉತ್ತಮಗಂಧರ್ವರಿಗೆ ಪರಮಾತ್ಮ ತೋರುತ್ತಾನೆ.

ಇಲ್ಲಿ ಉತ್ತಮಗಂಧರ್ವರು ಎಂದು ವಿವಕ್ಷೆ ಮಾಡದಿದ್ದರೆ ಪಿತೃಗಳಿಗಿಂತಲೂ ಗಂಧರ್ವರು ನೀಚರಾದ್ದರಿಂದ ಪಿತೃಗಳಿಗಿಂತಲೂ ಅಧಿಕಸ್ಪಷ್ಟವಾದ ಪರಮಾತ್ಮನ ದರ್ಶನವನ್ನು ಹೇಳಿದರೆ ವಿರೋಧವು ಬರುತ್ತದೆ. ಉತ್ತಮಗಂಧರ್ವರು ಪಿತೃಗಳಿಗಿಂತಲೂ ಉತ್ತಮರಾದದ್ದರಿಂದ ಪಿತೃಗಳಿಗಿಂತಲೂ ಸ್ಪಷ್ಟವಾದ ಜ್ಞಾನವನ್ನು ಇವರಿಗೆ ಹೇಳಿದರೆ ಯಾವುದೇ ವಿರೋಧ ಬರುವುದಿಲ್ಲ.

ಬ್ರಹ್ಮಲೋಕದಲ್ಲಿರುವವರಿಗೆ ಸ್ವಪ್ನ-ಜಲ-ಕನ್ನಡಿಯಲ್ಲಿ ತೋರುವುದಕ್ಕಿಂತಲೂ ಸ್ಪಷ್ಟವಾಗಿ ತೋರುತ್ತಾನೆ ಪರಮಾತ್ಮ. ಕೇವಲ ನೆರಳಿನಲ್ಲಿ ಯಾವಪದಾರ್ಥವೂ ಸ್ಪಷ್ಟವಾಗಿ ತೋರುವುದಿಲ್ಲ. ಕೇವಲ ಆತಪವಿರುವಾಗ ನೇತ್ರಗಳಿಗೆ ಆತಪದ ಆಘಾತವಾಗುತ್ತದೆ. ಆದ್ದರಿಂದ ಸ್ಪಷ್ಟವಾಗಿ ಪದಾರ್ಥ ಕಾಣುವದಿಲ್ಲ. ಬಿಸಿಲು-ನೆರಳುಗಳು ಕೂಡಿದ ಪ್ರದೇಶದಲ್ಲಿ ಪದಾರ್ಥಗಳು ಹೇಗೆ ಸ್ಪಷ್ಟವಾಗಿ ತೋರುತ್ತವೋ ಹಾಗೆ ಬ್ರಹ್ಮಲೋಕದಲ್ಲಿ ಪರಮಾತ್ಮನ ದರ್ಶನವಾಗುತ್ತದೆ. ಈ ಎಲ್ಲ ಸ್ಥಳದಲ್ಲಿಯೂ ಜ್ಞಾನದೃಷ್ಟಿಯಿಂದಲೇ ಭಗವಂತ ಗೋಚರನಾಗುತ್ತಾನೆಯೇ ಹೊರತು ಪ್ರಾಕೃತದೃಷ್ಟಿಯಿಂದ ಸರ್ವಥಾ ಗೋಚರನಾಗುವುದಿಲ್ಲ.

ಕನ್ನಡಿಯಲ್ಲಿ ತನ್ನ ಮುಖವು ಸ್ಪಷ್ಟವಾಗಿ ತೋರುವಂತೆ ಜ್ಞಾನಿಗಳಾಗಿರುವ ಋಷಿಗಳಿಗೆ ಪರಮಾತ್ಮನ ದರ್ಶನ ಅಷ್ಟು ಸ್ಪಷ್ಟವಾಗಿ ಆಗುತ್ತದೆ. ಸ್ವಾಪ್ನಪದಾರ್ಥಗಳ ದರ್ಶನವಾದಂತೆ

**ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಮ್ ।**
**ಮಹದ್ಭಯಂ ವಜ್ರಮುದ್ಯತಂ ಯ ಏತದ್ ವಿದುರಮೃತಾಸ್ತೇ ಭವಂತಿ ॥**

ಪ್ರ-ಪ್ರಕೃಷ್ಟವಾಗಿ ಅಣ-ಚೇಷ್ಟಕನಾಗಿದ್ದಾನೆ. ಸರ್ವಪ್ರೇರಕನಾದುದರಿಂದ ಪರಮಾತ್ಮ ಪ್ರಾಣನಾಮಕನಾಗಿದ್ದಾನೆ. ಈ ಪ್ರಾಣನಾಮಕನಾದ ಪರಮಾತ್ಮನಿಂದಲೇ ಸಮಗ್ರಪ್ರಪಂಚವೆಲ್ಲ ಉತ್ಪನ್ನವಾಗಿದೆ. ಸ್ವವಿಹಿತವಾದ ಕರ್ತವ್ಯಕರ್ಮಗಳನ್ನು ಆಚರಿಸದವರು ಈ ಪರಮಾತ್ಮನಿಂದ ಭಯವನ್ನು ಹೊಂದುತ್ತಾರೆ. ಸ್ವವಿಹಿತಕರ್ತವ್ಯಗಳನ್ನು ಪರಿತ್ಯಜಿಸಿದವರಿಗೆ, ಶಿಕ್ಷಿಸಲು ಪ್ರವೃತ್ತವಾದ ವಜ್ರಾಯುಧದಂತೆ ಭಯಪ್ರದನಾಗಿದ್ದಾನೆ ಪರಮಾತ್ಮ. ಪರಮಾತ್ಮನ ಈ ಮಹಿಮೆಯನ್ನು ತಿಳಿದು ಸ್ವವಿಹಿತವಾದ ಧರ್ಮಗಳನ್ನು ಶ್ರದ್ಧೆಯಿಂದ ಅನುಷ್ಠಾನಮಾಡುವವರು ಮುಕ್ತರಾಗುತ್ತಾರೆ. ಆದ್ದರಿಂದ ವಜ್ರವೆಂದರೆ ವಜ್ರಾಯುಧವೆಂದು ಅರ್ಥವಲ್ಲ. ವಜ್ರಾಯುಧದ ಜ್ಞಾನದಿಂದ ಯಾರಿಗೂ ಮುಕ್ತಿಯಾಗುವದಿಲ್ಲ. ಕಿಂತು ವಜ್ರದಂತೆ ಭಯಂಕರನಾದ ಪರಮಾತ್ಮ ಎಂದು ಅರ್ಥ. ॥೨.೩.೨॥

**ಭಯಾದಸ್ಯಾಗ್ನಿಸ್ತಪತಿ ಭಯಾತ್ ತಪತಿ ಸೂರ್ಯಃ ।**
**ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥೨.೩.೩॥**

ಭಗವಂತನ ಭಯಪ್ರದತ್ವವೆಂಬ ಗುಣವನ್ನೇ ಈ ಮಂತ್ರವು ವಿಶೇಷವಾಗಿ ತಿಳಿಸುತ್ತದೆ. ಪರಮಾತ್ಮನ ಭಯದಿಂದಲೇ ಅಗ್ನಿಯು ದಹಿಸುವ ಕಾರ್ಯದಲ್ಲಿ ನಿಮಗ್ನನಾಗುತ್ತಾನೆ. ಇವನ ಭಯದಿಂದಲೇ ಸೂರ್ಯನು ಪ್ರಕಾಶಕನಾಗುತ್ತಾನೆ. ಇಂದ್ರನು ಕೂಡಾ ಪರಮಾತ್ಮನ ಭಯದಿಂದಲೇ ಮಳೆಯನ್ನು ಸುರಿಸುತ್ತಾನೆ. ಐದನೆಯವನಾದ ಯಮನು ಈ ಪರಮಾತ್ಮನ ಭಯದಿಂದಲೇ ಪಾಪಿಗಳ ಶಿಕ್ಷಣೆಯಲ್ಲಿ ತೊಡಗುತ್ತಾನೆ. ॥೨.೩.೩॥

**ಇಹ ಚೇದಶಕದ್ ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ ।**
**ತತಃ ಸ್ವರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥೨.೩.೪॥**

ಮನುಷ್ಯಜನ್ಮ ಬಂದಾಗಲೇ ಭಗವಂತನ ಜ್ಞಾನವನ್ನು ಸಂಪಾದಿಸಬೇಕು. ಅನ್ಯಯೋನಿಯಲ್ಲಿ ಭಗವಂತನ ತತ್ತ್ವಜ್ಞಾನವನ್ನು ಸಂಪಾದಿಸುವುದು ಸಾಧ್ಯವಿಲ್ಲ. ಇದನ್ನು ತಿಳಿದು ಬಾಲ್ಯಾವಸ್ಥೆಯಲ್ಲಿಯೇ ಅತಿಶೀಘ್ರವಾಗಿ ಜ್ಞಾನವನ್ನು ಸಂಪಾದಿಸಿದ್ದಾನೆ ನಚಿಕೇತ. ಅವನನ್ನು ನೋಡಿ ವಿಸ್ಮಿತರಾಗಿ ಸಾಧಕರಾದವರು ಕೂಡಾ ಹೀಗೆಯೇ ತತ್ತ್ವಜ್ಞಾನವನ್ನು ಸಂಪಾದಿಸಲು ಪ್ರವೃತ್ತರಾಗಬೇಕು. ಈ ವಿಷಯವನ್ನು ತಿಳಿಸುತ್ತಾ ಜ್ಞಾನದ ಫಲವನ್ನು ಈ ಮಂತ್ರ ತಿಳಿಸುತ್ತದೆ.

ಮನುಷ್ಯಜನ್ಮ ಬಂದಾಗಲೇ, ಈ ಶರೀರ ಜೀರ್ಣವಾಗುವದಕ್ಕಿಂತಲೂ ಮೊದಲಿಗೆ ತತ್ತ್ವಜ್ಞಾನವನ್ನು ಸಂಪಾದಿಸಲು ಸಾಧಕನು ಪ್ರವೃತ್ತನಾಗಬೇಕು. ಹೀಗೆ ಮಾಡಲು ಜೀವನು ಸಮರ್ಥನಾದರೆ ಸ್ವ-ಸ್ವರೂಪಭೂತವಾದ, ರ-ಸುಖ, ಗ-ಜ್ಞಾನ ಇದರ ಅಭಿವ್ಯಕ್ತಿಗೆ

ಯೋಗ್ಯಸ್ಥಳಗಳಾದದ್ದರಿಂದ ಸ್ವರ್ಗಶಬ್ದಿತವಾದ ಶ್ವೇತದ್ವೀಪ-ಅನಂತಾಸನ-ವೈಕುಂಠಗಳಲ್ಲಿ ಚಿನ್ಮಯವಾದ ಶರೀರವನ್ನು ಪಡೆಯಲು ಸಮರ್ಥನಾಗುತ್ತಾನೆ. ಆದ್ದರಿಂದ ಶರೀರಪಾತಕ್ಕಿಂತಲೂ ಪೂರ್ವದಲ್ಲಿಯೇ ತತ್ತ್ವಜ್ಞಾನವನ್ನು ಸಂಪಾದಿಸಬೇಕು. ॥೨.೩.೪॥

ಯಥಾಽದರ್ಶೇ ತಥಾತ್ಮನಿ ಯಥಾ ಸ್ವಪ್ನೇ ತಥಾ ಪಿತೃಲೋಕೇ ।
ಯಥಾಪ್ಸು ಪರೀವ ದೃಶ್ಯತೇ ತಥಾ ಗಂಧರ್ವಲೋಕೇ ।
ಛಾಯಾತಪಯೋರಿವ ಬ್ರಹ್ಮಲೋಕೇ ॥೨.೩.೫॥

ಎಲ್ಲರಿಗೂ ಏಕಪ್ರಕಾರವಾದ ಬೋಧವಿರುವದಿಲ್ಲ. ಜ್ಞಾನದಲ್ಲಿ ಅನೇಕಪ್ರಕಾರತೆ ಇದೆ ಅದನ್ನು ತಿಳಿಸಲು ಈ ಮಂತ್ರ ಪ್ರವೃತ್ತವಾಗಿದೆ.

ಜೀವನಲ್ಲಿ ಇರುವ ಪರಮಾತ್ಮ ಕನ್ನಡಿಯಲ್ಲಿ ಮುಖವು ಸ್ಪಷ್ಟವಾಗಿ ತೊರುವಂತೆ ಜ್ಞಾನಿಗಳಾದ ಋಷಿಗಳಿಗೆ ತೊರುತ್ತಾನೆ. ಸ್ವಪ್ನದಲ್ಲಿ ಘಟಾದಿಗಳು ತೋರುವಂತೆ ಅಲ್ಪಾಭಿವ್ಯಕ್ತಿಯುಕ್ತನಾಗಿ ಪಿತೃಲೋಕದಲ್ಲಿ ಪಿತೃಗಳಿಗೆ ತೋರುತ್ತಾನೆ. ಸ್ವಪ್ನದಲ್ಲಿ ತೋರುವ ಪದಾರ್ಥಗಳಿಗಿಂತಲೂ ಕಿಂಚಿದಧಿಕಸ್ಪಷ್ಟವಾಗಿ ಸ್ವಚ್ಛವಾದ ನೀರಿನಲ್ಲಿರುವ ಕಲ್ಲು ಮೊದಲಾದವುಗಳು ಕಾಣುವಂತೆ ಗಂಧರ್ವಲೋಕದಲ್ಲಿ ಉತ್ತಮಗಂಧರ್ವರಿಗೆ ಪರಮಾತ್ಮ ತೋರುತ್ತಾನೆ.

ಇಲ್ಲಿ ಉತ್ತಮಗಂಧರ್ವರು ಎಂದು ವಿವಕ್ಷೆ ಮಾಡದಿದ್ದರೆ ಪಿತೃಗಳಿಗಿಂತಲೂ ಗಂಧರ್ವರು ನೀಚರಾದ್ದರಿಂದ ಪಿತೃಗಳಿಗಿಂತಲೂ ಅಧಿಕಸ್ಪಷ್ಟವಾದ ಪರಮಾತ್ಮನ ದರ್ಶನವನ್ನು ಹೇಳಿದರೆ ವಿರೋಧವು ಬರುತ್ತದೆ. ಉತ್ತಮಗಂಧರ್ವರು ಪಿತೃಗಳಿಗಿಂತಲೂ ಉತ್ತಮರಾದದ್ದರಿಂದ ಪಿತೃಗಳಿಗಿಂತಲೂ ಸ್ಪಷ್ಟವಾದ ಜ್ಞಾನವನ್ನು ಇವರಿಗೆ ಹೇಳಿದರೆ ಯಾವುದೇ ವಿರೋಧ ಬರುವುದಿಲ್ಲ.

ಬ್ರಹ್ಮಲೋಕದಲ್ಲಿರುವವರಿಗೆ ಸ್ವಪ್ನ-ಜಲ-ಕನ್ನಡಿಯಲ್ಲಿ ತೋರುವುದಕ್ಕಿಂತಲೂ ಸ್ಪಷ್ಟವಾಗಿ ತೋರುತ್ತಾನೆ ಪರಮಾತ್ಮ. ಕೇವಲ ನೆರಳಿನಲ್ಲಿ ಯಾವಪದಾರ್ಥವೂ ಸ್ಪಷ್ಟವಾಗಿ ತೋರುವುದಿಲ್ಲ. ಕೇವಲ ಆತಪವಿರುವಾಗ ನೇತ್ರಗಳಿಗೆ ಆತಪದ ಆಘಾತವಾಗುತ್ತದೆ. ಆದ್ದರಿಂದ ಸ್ಪಷ್ಟವಾಗಿ ಪದಾರ್ಥ ಕಾಣುವದಿಲ್ಲ. ಬಿಸಿಲು-ನೆರಳುಗಳು ಕೂಡಿದ ಪ್ರದೇಶದಲ್ಲಿ ಪದಾರ್ಥಗಳು ಹೇಗೆ ಸ್ಪಷ್ಟವಾಗಿ ತೋರುತ್ತವೋ ಹಾಗೆ ಬ್ರಹ್ಮಲೋಕದಲ್ಲಿ ಪರಮಾತ್ಮನ ದರ್ಶನವಾಗುತ್ತದೆ. ಈ ಎಲ್ಲ ಸ್ಥಳದಲ್ಲಿಯೂ ಜ್ಞಾನದೃಷ್ಟಿಯಿಂದಲೇ ಭಗವಂತ ಗೋಚರನಾಗುತ್ತಾನೆಯೇ ಹೊರತು ಪ್ರಾಕೃತದೃಷ್ಟಿಯಿಂದ ಸರ್ವಥಾ ಗೋಚರನಾಗುವುದಿಲ್ಲ.

ಕನ್ನಡಿಯಲ್ಲಿ ತನ್ನ ಮುಖವು ಸ್ಪಷ್ಟವಾಗಿ ತೋರುವಂತೆ ಜ್ಞಾನಿಗಳಾಗಿರುವ ಋಷಿಗಳಿಗೆ ಪರಮಾತ್ಮನ ದರ್ಶನ ಅಷ್ಟು ಸ್ಪಷ್ಟವಾಗಿ ಆಗುತ್ತದೆ. ಸ್ವಾಪ್ನಪದಾರ್ಥಗಳ ದರ್ಶನವಾದಂತೆ

ಪಿತೃಗಳಿಗೆ ಅಷ್ಟು ಸ್ಪಷ್ಟವಾಗಿ ಪರಮಾತ್ಮನ ದರ್ಶನವಾಗುತ್ತದೆ. ಹೀಗಾಗಿ ಋಷಿಗಳ ಜ್ಞಾನಕ್ಕಿಂತಲೂ ಪಿತೃಗಳ ಜ್ಞಾನ ಅಲ್ಪವಾಗಿರುತ್ತದೆ ಎಂದು ತಿಳಿದು ಬರುತ್ತದೆ. ಸ್ವಾಪ್ನಪದಾರ್ಥಕ್ಕಿಂತಲೂ ಸ್ಪಷ್ಟವಾಗಿ ಕನ್ನಡಿಯಲ್ಲಿ ತೋರುವ ಮುಖಕ್ಕಿಂತಲೂ ಅಸ್ಪಷ್ಟವಾಗಿ ನೀರಿನಲ್ಲಿ ಸೂರ್ಯಾದಿಗಳ ಪ್ರತಿಬಿಂಬವು ತೋರುವಂತೆ ಗಂಧರ್ವರಿಗೆ ಗಂಧರ್ವಲೋಕದಲ್ಲಿ ತೋರುತ್ತಾನೆ. ॥೨.೩.೫॥

ಇಂದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್ ।
ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ ॥೨.೩.೬॥

ಸ್ವರೂಪಸುಖದ ಅಭಿವ್ಯಕ್ತಿಸ್ಥಾನವಾದ ವೈಕುಂಠಾದಿಲೋಕಗಳಲ್ಲಿ ತಾನು ಕಿರಿಯರಿಂದ ಪೂಜ್ಯನಾಗಿ ಇರಬೇಕಾದರೆ ತಿಳಿಯಬೇಕಾದದ್ದು ಮತ್ತು ಬ್ರಹ್ಮದರ್ಶನಕ್ಕೆ ಅಂಗವಾದದ್ದು ದೇವತಾಪರಿಜ್ಞಾನ. ಅದನ್ನು ತಿಳಿಸುತ್ತದೆ ಈ ಮಂತ್ರ.

ಇಂದ್ರಿಯಗಳು ತದಭಿಮಾನಿಗಳಾದ ದೇವತೆಗಳು ಪರಸ್ಪರ ವಿಲಕ್ಷಣರಾಗಿದ್ದಾರೆ. ತಾರತಮ್ಯೋಪೇತರಾಗಿದ್ದಾರೆ. ಪರಮಾತ್ಮನಿಂದಲೂ ಭಿನ್ನರಾಗಿದ್ದಾರೆ. ಪರಮಾತ್ಮನಿಗೆ ಆಧೀನರಾಗಿದ್ದಾರೆ. ಪರಮಾತ್ಮನಿಂದಲೇ ಅವರಿಗೆ ಉತ್ಪತ್ತಿ ಮತ್ತು ವಿನಾಶಗಳು ಆಗುತ್ತವೆ. ಅವರು ಮಾಡುವ ಕಾರ್ಯಗಳು ವಿಚಿತ್ರವಾಗಿರುತ್ತವೆ. ಹೀಗೆ ದೇವತೆಗಳೆಲ್ಲರೂ ಪರಮಾತ್ಮನ ಆಧೀನರಾಗಿದ್ದಾರೆಂದು ತಿಳಿದು ದೇವತೋಪಾಸನೆಯನ್ನು ಮಾಡುವ ಬ್ರಹ್ಮಜ್ಞಾನಿಗಳು ಶೋಕಶೂನ್ಯರಾಗಿ ಸುಖವಿರುವ ಲೋಕಗಳನ್ನು ಪಡೆಯುತ್ತಾರೆ.

ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ತ್ವಮುತ್ತಮಮ್ ।
ಸತ್ತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಮ್ ॥೨.೩.೭॥

''ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ'' ಎಂಬ ವಚನದಿಂದ ದೇವತೆಗಳಲ್ಲಿ ತಾರತಮ್ಯವು ಹಿಂದೆಯೇ ಪ್ರತಿಪಾದಿತವಾಗಿದೆ. ಆದರೂ ದೇವತಾತಾರತಮ್ಯಪೂರ್ವಕವಾಗಿ ಭಗವಂತನ ಸರ್ವೋತ್ತಮತ್ತ್ವದ ಜ್ಞಾನದಲ್ಲಿಯೇ ಸಕಲವಾಕ್ಯಗಳಿಗೂ ಮಹಾತಾತ್ಪರ್ಯವಿದೆ ಎಂಬುದನ್ನು ತಿಳಿಸಲು ಮತ್ತೆ ಅದೇ ವಿಷಯವನ್ನು ಇಲ್ಲಿ ಪ್ರತಿಪಾದಿಸುತ್ತಿದೆ ಉಪನಿಷತ್ತು. ಉಕ್ತವಾದ ವಿಷಯದಲ್ಲಿ ಮಹಾತಾತ್ಪರ್ಯವಿದೆ ಎಂದು ತಿಳಿಸುವುದಕ್ಕಾಗಿ ಪುನರ್ವಚನವು ಶಾಸ್ತ್ರಸಿದ್ಧವಾಗಿದೆ. ಹೀಗಾಗಿ ಈ ಪುನರುಕ್ತಿ ದೋಷಾಪಾದಕವಾಗುವದಿಲ್ಲ.

ಇಂದ್ರಿಯಾಭಿಮಾನಿಗಳಾದ ದೇವತೆಗಳಿಗಿಂತಲೂ ಅರ್ಥಾಭಿಮಾನಿಗಳಾದ ದೇವತೆಗಳು ಉತ್ತಮರಾಗಿದ್ದಾರೆ. ಅರ್ಥಾಭಿಮಾನಿಗಳಾದ ದೇವತೆಗಳಿಗಿಂತಲೂ ಮನೋಽಭಿಮಾನಿದೇವತೆಗಳಾದ ರುದ್ರದೇವರು ಉತ್ತಮರಾಗಿದ್ದಾರೆ. ಮನೋಽಭಿಮಾನಿಗಳಾದ ರುದ್ರದೇವರಿಗಿಂತಲೂ ಬುದ್ಧಿಗೆ ಅಭಿಮಾನಿನಿಯಾದ ಸರಸ್ವತೀದೇವಿಯು ಉತ್ತಮಳಾಗಿದ್ದಾಳೆ.

ಬುದ್ಧಿಗೆ ಅಭಿಮಾನಿನಿಯಾದ ಸರಸ್ವತಿಗಿಂತಲೂ ಮಹತ್ತತ್ತ್ವಕ್ಕೆ ಅಭಿಮಾನಿಗಳಾದ ಬ್ರಹ್ಮದೇವರು ಉತ್ತಮರಾಗಿದ್ದಾರೆ. ಮಹತ್ತತ್ತ್ವಕ್ಕೆ ಅಭಿಮಾನಿಗಳಾದ ಬ್ರಹ್ಮದೇವರಿಗಿಂತಲೂ ಅವ್ಯಕ್ತತತ್ತ್ವಕ್ಕೆ ಅಭಿಮಾನಿನಿಯಾಗಿರುವ ಲಕ್ಷ್ಮೀದೇವಿಯರು ಉತ್ತಮರಾಗಿದ್ದಾರೆ.

ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋऽಲಿಂಗ ಏವ ಚ ।
ತಂ ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ ॥೨.೩.೮॥

ಅವ್ಯಕ್ತತತ್ತ್ವಕ್ಕೆ ಅಭಿಮಾನಿನಿಯಾದ ಲಕ್ಷ್ಮೀದೇವಿಗಿಂತಲೂ ಪರಪುರುಷನಾದ ಪರಮಾತ್ಮ ಉತ್ತಮನಾಗಿದ್ದಾನೆ. ದೇಶತಃ-ಕಾಲತಃ-ಗುಣತಃ-ಶಕ್ತಿತಃ ಎಲ್ಲವನ್ನೂ ವ್ಯಾಪಿಸಿಕೊಂಡಿದ್ದಾನೆ. ಸರ್ವತ್ರ ವ್ಯಾಪ್ತನಾಗಿದ್ದಾನೆ. ಅವನು ಪ್ರಾಕೃತ-ಭೌತಿಕಶರೀರರಹಿತನಾಗಿದ್ದಾನೆ. ಮತ್ತು ಅನುಮಾಪಕವಾದ, ವಿಷ್ಣುವನ್ನು ತಿಳಿಸುವ ಲಿಂಗಗಳು ಯಾವುದೂ ಇಲ್ಲದಿದ್ದುದರಿಂದ ಅಲಿಂಗನಾಗಿದ್ದಾನೆ. ಇಂತಹ ಪರಮಾತ್ಮನನ್ನು ತಿಳಿದವನು ಲಿಂಗಶರೀರದಿಂದ ಮುಕ್ತನಾಗಿ ಸ್ವರೂಪಸುಖವನ್ನನುಭವಿಸುತ್ತಾನೆ.

ನ ಸಂದೃಶೇ ತಿಷ್ಠತಿ ರೂಪಮಸ್ಯ
ನ ಚಕ್ಷುಷಾ ಪಶ್ಯತಿ ಕಶ್ಚಿದೇನಮ್ ।
ಹೃದಾ ಮನೀಷಾ ಮನಸಾಭಿಕ್ಲೃಪ್ತೋ
ಯ ಏನಂ ವಿದುರಮೃತಾಸ್ತೇ ಭವಂತಿ ॥೨.೩.೯॥

ಪರಮಾತ್ಮನನ್ನು ತಿಳಿಯುವುದರಿಂದ ಅಧಿಕಾರಿಯು ಮುಕ್ತನಾಗುತ್ತಾನೆ. ಹೀಗೆ ಮುಕ್ತಿಗೆ ಸಾಧನವಾಗಿರುವ ಪರಮಾತ್ಮನ ಜ್ಞಾನ ಚಕ್ಷುರಾದಿಇಂದ್ರಿಯಗಳಿಂದ ಅನಾಯಾಸವಾಗಿ ಸಾಧ್ಯವಾಗುವದಿಲ್ಲ. ಕಿಂತು ಶ್ರವಣಾದಿಗಳಿಂದ ಉಪೋದ್ಬಲಿತವಾದ ಮನಸ್ಸಿನಿಂದ ಮಾತ್ರ ಸಾಧ್ಯವಾಗುತ್ತದೆ ಎಂಬುದನ್ನು ಈ ಮಂತ್ರ ತಿಳಿಸುತ್ತದೆ.

ಪರಮಾತ್ಮನ ರೂಪವಿದು ದೃಷ್ಟಿವಿಷಯವಾಗಲು ಸಾಧ್ಯವಿಲ್ಲ. ಆದ್ದರಿಂದ ಪರಮಾತ್ಮನನ್ನು ತಿಳಿಯುವದು ಸುಲಭವಲ್ಲ. ಪರಮಾತ್ಮನನ್ನು ತಿಳಿಯಲು ಪ್ರತ್ಯಕ್ಷ-ಅನುಮಾನ ಇಲ್ಲ ಎಂದು ತಿಳಿಸಿದ ಮಾತ್ರಕ್ಕೆ ಅಜ್ಞೇಯನೆಂದು ತಿಳಿಯಬಾರದು. ಪ್ರಾಕೃತವಾದ ಇಂದ್ರಿಯಗಳಿಂದ ಅವನ ರೂಪ ಅದೃಶ್ಯವಾಗಿದ್ದರೂ ಸಾತ್ತ್ವಿಕವಾದ ಬುದ್ಧಿಯಿಂದ, ಜಿಜ್ಞಾಸಾದಿಂದ, ಮನನದಿಂದ ಯಥಾರ್ಥವಾಗಿ ದೃಷ್ಟಿಗೆ ವಿಷಯನಾಗುತ್ತಾನೆ. ಈ ರೀತಿಯಾಗಿ ಜ್ಞಾನದೃಷ್ಟಿಯಿಂದ ಪರಮಾತ್ಮನನ್ನು ಕಂಡಾಗ ಮುಕ್ತಿಯು ದೊರೆಯುತ್ತದೆ. ಪರಮಾತ್ಮನ ಪ್ರಾದುರ್ಭಾವ-ರೂಪಗಳನ್ನು ಪ್ರಾಕೃತವಾದ ದುಷ್ಟವಾದ ಇಂದ್ರಿಯಗಳಿಂದಲೂ ಪ್ರತ್ಯಕ್ಷವಾಗಿ ನೋಡಲು ಸುಲಭಸಾಧ್ಯವಾದುದರಿಂದ ಮುಕ್ತಿ ಇದು ಸುಲಭವೆಂದು ಎಣಿಸಬಾರದು. ದುಷ್ಟವಾದ ದೃಷ್ಟಿಯಿದು ಮುಕ್ತಿಗೆ ಸಾಧಕವಾಗುವುದಿಲ್ಲ. ಕಿಂತು ಬಾಧಕವೇ ಆಗುತ್ತದೆ. ನಿರ್ದೋಷವಾದ ದೃಷ್ಟಿಯಿಂದಲೇ ಮುಕ್ತಿಯು ದೊರೆಯುತ್ತದೆ.

"ನ ಸಂದೃಶೇ ತಿಷ್ಠತಿ ರೂಪಮಸ್ಯ" ಎಂಬ ವಚನದಿಂದ ಭಗವದ್ರೂಪವಿದು ಇಂದ್ರಿಯಾಗೋಚರವಾಗಿದೆ ಎಂದು ಹೇಳುತ್ತಿದ್ದಾರೆ. ಇದು ಯುಕ್ತವಾದುದಲ್ಲ. ಮತ್ಸ್ಯಾದಿ ಅವತಾರಗಳು ಚಕ್ಷುರ್ವಿಷಯವಾಗಿವೆ. ಎಂದು ಶಂಕಿಸಿದರೆ ಮತ್ಸ್ಯಾದಿರೂಪಗಳು ಅವತಾರರೂಪಗಳೇ ಹೊರತು ಅಂತರ್ಯಾಮಿರೂಪಗಳಲ್ಲ. ಅಂತರ್ಯಾಮಿರೂಪಗಳು ಮಾತ್ರ ಚಕ್ಷುರ್ವಿಷಯವಾಗುವದಿಲ್ಲವೆಂದು ಶ್ರುತಿಯ ಅಭಿಪ್ರಾಯವೆಂದು ಹೇಳಬೇಕು. ಹಾಗಾದರೆ ಅವತಾರರೂಪಗಳ ಜ್ಞಾನ ಮುಕ್ತಿಗೆ ಸಾಧನವಲ್ಲ. ಕಿಂತು ಸ್ವಹೃದಿಸ್ಥವಾದ ರೂಪ ಅಥವಾ ವ್ಯಾಪ್ತವಾದ ರೂಪದ ಜ್ಞಾನ ಮಾತ್ರ ಮುಕ್ತಿಗೆ ಸಾಧಕವೆಂದು ಹೇಳಬೇಕಾಗುತ್ತದೆ. ಈ ಮಾತು ಸರಿಯಾಗುವದಿಲ್ಲ. "ದೃಷ್ಟ್ವೈವ ಹ್ಯವತಾರಾಣಾಂ ಮುಚ್ಯಂತೇ ಕೇಚಿದಂಜಸಾ" ಎಂಬ ಪ್ರಮಾಣವಚನವು ಅವತಾರರೂಪಗಳ ಸಾಕ್ಷಾತ್ಕಾರವೂ ಮುಕ್ತಿಗೆ ಸಾಧಕವಾಗಿದೆ ಎಂದು ತಿಳಿಸುತ್ತದೆ. ಸತ್ಯ. ಆದರೆ ಕೇವಲ ಪ್ರಾಕೃತವಾದ ಚಕ್ಷುರಿಂದ್ರಿಯದಿಂದ ಪರಮಾತ್ಮನ ಅವತಾರರೂಪವನ್ನು ನೋಡಿದ ಮಾತ್ರಕ್ಕೆ ಮುಕ್ತಿಯಾಗುವದಿಲ್ಲ. ಬಾಹ್ಯದಲ್ಲಿ ಚಕ್ಷುರಾದಿ ಇಂದ್ರಿಯಗಳಿಂದ ತಿಳಿದಿರುವ ಪರಮಾತ್ಮನನ್ನು ಹೃದಯದಲ್ಲಿ ಉಪಾಸನೆ ಮಾಡಬೇಕು. ಸ್ನೇಹದಿಂದ ಪರಮಾತ್ಮನನ್ನು ನಿತ್ಯವೂ ಚಿಂತಿಸಬೇಕು. ಶ್ರವಣಾದಿಗಳಿಂದ ಜನಿತವಾದ ಜ್ಞಾನದ ಸಹಕಾರವನ್ನು ಪಡೆದ ಮನಸ್ಸಿನಿಂದ ಧ್ಯಾನಮಾಡಬೇಕು. ಈ ಧ್ಯಾನರೂಪವಾದ ಉಪಾಯದಿಂದ ಪರಮಾತ್ಮನ ರೂಪದ ಅಪರೋಕ್ಷವು ಸುಲಭವಾಗುತ್ತದೆ. ಅಪರೋಕ್ಷತಃ ಪರಮಾತ್ಮನ ಜ್ಞಾನವಾದಾಗ ಮಾತ್ರ ಮುಕ್ತಿಯಾಗುತ್ತದೆ. ಇಲ್ಲದಿದ್ದರೆ ಸರ್ವಥಾ ಮುಕ್ತಿಯು ದೊರೆಯುವದಿಲ್ಲ. ಅವತಾರರೂಪಗಳ ಜ್ಞಾನದಿಂದ ಯಾರಿಗೆ ಮುಕ್ತಿಯನ್ನು ಹೇಳಿರುವರೋ ಅವರು ಕೂಡಾ ಹೃದಯದಲ್ಲಿ ಅದೇ ಅವತಾರರೂಪವನ್ನು ಕಿಂಚಿದುಪಾಸನೆ ಮಾಡಿಯೇ ಮುಕ್ತಿಯನ್ನು ಸಂಪಾದಿಸಬೇಕು. ಈ ವಿಷಯವನ್ನು ತಿಳಿಸುವ ಆಚಾರ್ಯರ ಬೃಹದ್ಭಾಷ್ಯದಲ್ಲಿಯ ಪ್ರಮಾಣವಚನವು ಹೀಗಿದೆ.

.............................. ಹೃದ್ಯುಪಾಸ್ಯ ಹರಿಂ ಪುನಃ ।
ಮುಕ್ತಿಮೇತ್ಯಥ ಯೋ ಬಾಹ್ಯಾನ್ಮುಕ್ತಿಮೇಷ್ಯತಿ ಸೋऽಪಿ ತು ।
ಹೃದಿ ಕಿಂಚಿದುಪಾಸ್ಯೈವ ವಿಷ್ಣುಂ ಮುಕ್ತಿಮನುವ್ರಜೇತ್ ॥೨.೩.೯॥

ಯದಾ ಪಂಚಾऽವತಿಷ್ಠಂತೇ ಜ್ಞಾನಾನಿ ಮನಸಾ ಸಹ ।
ಬುದ್ಧಿಶ್ಚ ನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಮ್ ॥೨.೩.೧೦॥

ಪ್ರತ್ಯಾಹಾರ ಅರ್ಥಾತ್ ವಿಷಯಪರಾಙ್ಮುಖತ್ವ ಇದರಿಂದ ಸಿದ್ಧವಾದ ಧಾರಣಾದಿರೂಪವಾದ ಧ್ಯಾನ ಇದು ಜ್ಞಾನಸಾಧನಗಳಲ್ಲಿ ಅಭ್ಯರ್ಹಿತವಾದ ಸಾಧನವಾಗಿದೆ ಎಂಬುದನ್ನು ಮತ್ತು ಇಂದ್ರಿಯಗಳನ್ನು ನಿಯಮನಮಾಡಿದ ಅವಸ್ಥೆಯಲ್ಲಿಯೇ ಸಾಧಕನು ಅಪ್ರಮತ್ತನಾಗಿ ಇರುತ್ತಾನೆ ಎಂಬ ವಿಷಯವನ್ನು ಈ ಮಂತ್ರ ತಿಳಿಸುತ್ತದೆ.

ಯಾವಾಗ ಜ್ಞಾನಸಾಧನವಾಗಿರುವ ಐದು ಇಂದ್ರಿಯಗಳು ಮನಸ್ಸಿನಿಂದ ಕೂಡಿ ಇರುತ್ತವೆಯೋ ಅರ್ಥಾತ್ ವಿಷಯಗಳ ಕಡೆ ಹರಿಯದೇ ಹರಿವಿಷಯಕವಾಗಿರುತ್ತವೆಯೋ, ಬುದ್ಧಿ ಇದು ಭಗವದ್ವಿಷಯದಲ್ಲಿ ಚಂಚಲವಾಗದೇ ಇರುತ್ತದೋ ಆವಾಗ ಸಾಧಕನಾದವನು ಅಪ್ರಮತ್ತನಾಗುತ್ತಾನೆ. ಹೀಗೆ ಏಳೂ ಇಂದ್ರಿಯಗಳು ವಿಷಯವಿಚಲಿತವಾಗದೇ ಹರಿಯಲ್ಲಿ ನಿಷ್ಠೆಯನ್ನು ಪಡೆದಿರುವ ಈ ಅವಸ್ಥೆ ಅತ್ಯುತ್ತಮವಾದ ಜ್ಞಾನಕ್ಕೆ ಸಾಧನೆಯಾಗುತ್ತದೆಂದು ಜ್ಞಾನಿಗಳು ಹೇಳುತ್ತಾರೆ. ॥೨.೩.೧೦॥

**ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್ ।**
**ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥೨.೩.೧೧॥**

ಇಂದ್ರಿಯಗಳನ್ನು ಸ್ಥಿರವಾಗಿ ವಿಷಯಪರಾಙ್ಮುಖವಾಗುವಂತೆ ಮಾಡಿ ಪರಮಾತ್ಮನನ್ನು ಧರಿಸುವ ಹಾಗೆ ಮಾಡುವದೇ ಯೋಗವೆನಿಸಿಕೊಳ್ಳುತ್ತದೆ. ಈ ಯೋಗದ ಅವಸ್ಥೆಯಲ್ಲಿ ಸಾಧಕನಾದವನು ಯಾವುದೇ ವಿಧವಾದ ಪ್ರಮಾದವನ್ನೆಸಗುವುದಿಲ್ಲ. ಈ ಯೋಗ ಪರಮಾತ್ಮನಿಂದಲೇ ಆಗುವ ಪ್ರಭವ ಅರ್ಥಾತ್ ಸ್ವರೂಪಸುಖಾಭಿವ್ಯಕ್ತಿ ಮತ್ತು ಅಪ್ಯಯ ದುಃಖನಾಶದ ಉದ್ದೇಶದಿಂದ ಯುಕ್ತವಾಗಿರಬೇಕು. ಮತ್ತು ಜಗತ್ತಿನ ಸೃಷ್ಟಿಸಂಹಾರಗಳನ್ನು ಮಾಡುವ ಭಗವಂತನನ್ನು ಕುರಿತದ್ದಾಗಿರಬೇಕು. ಭಗವದ್ವಿಷಯಕವಾಗಿರಬೇಕು ಈ ಯೋಗ. ಅಂದಾಗ ಮಾತ್ರ ಸಾಧಕನು ಮುಕ್ತನಾಗುತ್ತಾನೆ. ॥೨.೩.೧೧॥

**ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ ।**
**ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥2.3.12॥**

''ನ ಚಕ್ಷುಷಾ ಪಶ್ಯತಿ'' ಕಣ್ಣಿನಿಂದ ದೇವರನ್ನು ನೋಡಲಾಗುವದಿಲ್ಲ. ಹಾಗಾದರೆ ವಾಗಾದಿಇಂದ್ರಿಯಗಳಿಂದ ಭಗವಂತನನ್ನು ಪಡೆಯಬಹುದು ಎಂಬ ಶಂಕೆಯನ್ನು ಈ ಶ್ರುತಿ ಪರಿಹರಿಸುತ್ತದೆ.

''ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ'' ಎಂಬ ವಚನಕ್ಕೆ ಮೇಲೆ ತೋರುವ ಅರ್ಥ ಈ ರೀತಿಯಾಗಿರುತ್ತದೆ. ಪರಬ್ರಹ್ಮನಲ್ಲಿ ಮಾತ್ರ ಅಸ್ತಿತ್ವವನ್ನು ಮಾತ್ರ ತಿಳಿದುಕೊಳ್ಳಬೇಕು. ಇದರ ಅತಿರಿಕ್ತವಾಗಿ ಯಾವ ಧರ್ಮಗಳೂ ಪರಬ್ರಹ್ಮನಲ್ಲಿ ಇರುವದಿಲ್ಲ. ಸಕಲಗುಣಧರ್ಮ-ಶೂನ್ಯನಾಗಿದ್ದಾನೆ. ಹೀಗೆ ಉಪದೇಶಿಸುವವರಿಂದಲೇ ತತ್ತ್ವಜ್ಞಾನವನ್ನು ಪಡೆಯಬೇಕು. ಪರಬ್ರಹ್ಮ ಸಗುಣ-ಸಧರ್ಮಕ ಎಂದು ಉಪದೇಶಮಾಡುವವರಿಂದ ಪರಬ್ರಹ್ಮನನ್ನು ಸರಿಯಾಗಿ ತಿಳಿಯಲಾಗುವುದಿಲ್ಲ ಎಂಬುದಾಗಿ ವಿಪರೀತವಾದ ಅರ್ಥವು ತೋರುತ್ತದೆ. ಈ ಅರ್ಥವು ಮಹಾವಾರಾಹವಚನಕ್ಕೆ ವಿರುದ್ಧವಾಗಿದೆ. ಶ್ರೀಮದಾಚಾರ್ಯರು ಉದಾಹರಿಸಿದ ಮಹಾವಾರಾವಚನಕ್ಕೆ ಸಂವಾದಿಯಾದ ಅರ್ಥವನ್ನು ಹೀಗೆ ತಿಳಿಯಬೇಕು.

ವಾಗಿಂದ್ರಿಯದಿಂದ ಪರಮಾತ್ಮನನ್ನು ಪಡೆಯಲಾಗುವದಿಲ್ಲ. ಮನಸ್ಸಿನಿಂದಲೂ ಭಗವಂತನನ್ನು ತಿಳಿಯಲಾಗದು. ಹಾಗಾದರೆ ಭಗವತ್ಪ್ರಾಪಕವಾದದ್ದು ಯಾವುದು ಎಂಬ ಪ್ರಶ್ನೆಗೆ ಈ ರೀತಿಯಾಗಿ ಉತ್ತರವನ್ನು ತಿಳಿದುಕೊಳ್ಳಬೇಕು. ಅಸ್ತಿತ್ವವಿರುವ ಎಲ್ಲ ಪದಾರ್ಥಗಳಲ್ಲಿ ಉತ್ತಮನಾಗಿದ್ದಾನೆ ಪರಮಾತ್ಮ. ಹೀಗಾಗಿ ಪರಮಾತ್ಮನಿಗೆ ಅಸ್ತಿ ಎಂತಲೆ ನಾಮವಿದೆ. ಅ- ಅಧಿಕನಾಗಿ ಇದ್ದಾನೆ ಸತಃ- ಸತ್ ಆದ ಪದಾರ್ಥಗಳಿಗಿಂತಲೂ ಆದ್ದರಿಂದ ಅಸ್ತಿನಾಮಕನಾಗಿದ್ದಾನೆ ಭಗವಂತ. ಹೀಗೆ ಸರ್ವರಿಗೂ ಅಧಿಕನಾಗಿದ್ದಾನೆ ಪರಮಾತ್ಮ ಎಂದು ಪ್ರಸನ್ನಚಿತ್ತರಾಗಿ ಉಪದೇಶಿಸುವ ಗುರುಗಳಿಂದಲೇ ಪರಮಾತ್ಮನನ್ನು ತಿಳಿದುಕೊಳ್ಳಬಹುದಾಗಿದೆ. ಯಾರು ಪರಮಾತ್ಮನ ಸರ್ವೋತ್ಕರ್ಷವನ್ನು ತಿಳಿದಿಲ್ಲವೋ ಅವರು ಪರಮಾತ್ಮನನ್ನು ಯಥಾರ್ಥವಾಗಿ ತಿಳಿದಿರುವುದಿಲ್ಲ. ಆದ್ದರಿಂದ ಅಂಥವರಿಂದ ಪರಮಾತ್ಮನ ಜ್ಞಾನವನ್ನು ಹೇಗೆ ಪಡೆಯಲಾದೀತು ? ಸರ್ವಥಾ ಶ್ರೀಹರಿಯ ಜ್ಞಾನವನ್ನು ಅವರಿಂದ ಯಥಾರ್ಥವಾಗಿ ಪಡೆಯಲಾಗುವುದಿಲ್ಲ. ಅವರಿಂದ ಪಡೆದ ಉಪದೇಶವು ತಾರಕವೂ ಆಗುವುದಿಲ್ಲ.

ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ ।
ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥೨.೩.೧೩॥

ಗುರುಗಳ ಉಪದೇಶದಿಂದ ಪರಮಾತ್ಮ ಉಪಲಬ್ಧನಾಗುತ್ತಾನೆ. ಆದರೆ ಇದಕ್ಕೂ ಮೂಲ ಪರಮಾತ್ಮನ ಪ್ರಸಾದವೆಂದು ತಿಳಿಯಬೇಕು. ಪರಮಾತ್ಮನ ಪ್ರಸಾದವನ್ನು ಪಡೆಯದವನು ಗುರುಗಳಿಂದ ಎಷ್ಟು ಉಪದೇಶ ಪಡೆದರೂ ಆ ಉಪದೇಶ ವ್ಯರ್ಥವಾಗುತ್ತದೆ. ಈ ವಿಷಯವನ್ನು ತಿಳಿಸುವ ಮಂತ್ರವಿದು.

ಭಗವಂತ ಸನ್ಮಾತ್ರನಾಗಿದ್ದಾನೆ ಎಂದು ಅನ್ಯಥಾ ಅರ್ಥವು ಮೇಲ್ನೋಟಕ್ಕೆ ಇಲ್ಲಿ ತೋರುತ್ತದೆ. ಆದರೆ ಆ ಅರ್ಥ ಮಹಾವಾರಾಹಪುರಾಣಕ್ಕೆ ವಿರುದ್ಧವಾಗಿದೆ. ಈ ಮಂತ್ರದ ಯಥಾರ್ಥವಾದ ಅರ್ಥ ಈ ರೀತಿಯಾಗಿದೆ.

ಪರಬ್ರಹ್ಮ ಇದ್ದಾನೆ ಎಂದು ಮಾತ್ರ ತಿಳಿದರೆ ಸಾಕಾಗುವುದಿಲ್ಲ. ಕಿಂತು ಸರ್ವಸೃಷ್ಟಿಕರ್ತೃ-ವಾಗಿದ್ದಾನೆ ಎಂದು ತಿಳಿದಿರಬೇಕು. ಚೇತನಾಚೇತನರೂಪವಾದ ಸಕಲತತ್ತ್ವಗಳಿಗೆ ಉತ್ಪಾದಕನಾಗಿದ್ದಾನೆ. ಉಪಲಕ್ಷಣಯಾ ಸಕಲಜಗತ್ತಿನ ಸಂಹಾರಾದಿಗಳನ್ನು ಮಾಡುತ್ತಾನೆ ಎಂಬುದಾಗಿ ತಿಳಿಯಬೇಕು. ಪರಮಾತ್ಮ "ತತ್ತ್ವಭಾವ" ನಾಮಕನಾಗಿದ್ದಾನೆ. **ತತ್ತ್ವ**- ಪ್ರಕೃತಿಗೆ ಪ್ರಕೃತಿತ್ವವನ್ನು ಪುರುಷನಿಗೆ ಪುರುಷತ್ವವನ್ನು **ಭಾವಯತಿ**- ನೀಡುವವನು ಪರಮಾತ್ಮನೇ ಆಗಿದ್ದಾನೆ. ಆದ್ದರಿಂದ ತತ್ತ್ವಭಾವವೆಂದರೆ ಪರಮಾತ್ಮ. ತತ್ತ್ವಭಾವನಾದ ಪರಮಾತ್ಮನ ಪ್ರಸಾದದಿಂದಲೇ ಆಧಿಕ್ಯಜ್ಞಾನವಾಗುತ್ತದೆ. ಹೀಗೆ ಪರಮಾತ್ಮನ ಪ್ರಸಾದದಿಂದ ಆಧಿಕ್ಯಜ್ಞಾನ-ವನ್ನು ಪಡೆದವನು ಪರಮಾತ್ಮನ ವಿಶೇಷವಾದ ಪ್ರಸಾದಕ್ಕೆ ಪಾತ್ರನಾಗುತ್ತಾನೆ.

**ವೇದೇಶೀಯವಿಶೇಷ-** ಪರಮಾತ್ಮನ ಪ್ರಸಾದದಿಂದಲೇ ಆಧಿಕ್ಯಜ್ಞಾನ. ಆಧಿಕ್ಯಜ್ಞಾನದಿಂದಲೇ ಪರಮಾತ್ಮನ ಪ್ರಸಾದವೆಂದು ಹೇಳಿದರೆ ಅನ್ಯೋನ್ಯಾಶ್ರಯ ಬರುತ್ತದೆ. ಆಧಿಕ್ಯಜ್ಞಾನದಿಂದ ಪ್ರಸಾದ. ಪ್ರಸಾದದಿಂದ ಆಧಿಕ್ಯಜ್ಞಾನವೆಂದು ಹೇಳಿದರೆ ಒಂದಕ್ಕೆ ಮತ್ತೊಂದು ಕಾರಣ-ವೆಂದಾಗುತ್ತದೆ. ಒಂದಕ್ಕಿಂತಲೂ ಒಂಮ ಮೊದಲು ಇರಬೇಕಾಗುತ್ತದೆ. ಇದು ಸಾಧ್ಯವಿಲ್ಲ. ಆದ್ದರಿಂದ ಪ್ರಸಾದ-ಆಧಿಕ್ಯಜ್ಞಾನಗಳಿಗೆ ಕಾರ್ಯಕಾರಣಭಾವವೇ ಇಲ್ಲವೆಂದಾಗುತ್ತದೆ ಎಂಬ ಶಂಕೆಯು ಬರುತ್ತದೆ.

ಈ ಶಂಕೆ ಸರಿಯಾದುದಲ್ಲ. ಅದೇ ಪ್ರಸಾದವು ಅದೇ ಆಧಿಕ್ಯಜ್ಞಾನಕ್ಕೆ ಕಾರಣವೆಂದು ನಾವು ಹೇಳಿದ್ದರೆ ಈ ಶಂಕೆ ಯುಕ್ತವಾಗುತ್ತಿತ್ತು. ಅರ್ಥಾತ್ 'ಅ' ಎಂಬ ಪ್ರಸಾದವು 'ಆ' ಎಂಬ ಆಧಿಕ್ಯಜ್ಞಾನಕ್ಕೆ ಕಾರಣವಾಗಿದೆ. ಈ 'ಆ' ಎಂಬ ಆಧಿಕ್ಯಜ್ಞಾನವೇ 'ಅ' ಎಂಬ ಪ್ರಸಾದಕ್ಕೆ ಕಾರಣವೆಂದು ಹೇಳಿದಾಗ ಅನ್ಯೋನ್ಯಾಶ್ರಯವೆಂಬ ದೋಷ ಬರುತ್ತಿತ್ತು. ಪ್ರಸ್ತುತ ನಾವು ಕಾರ್ಯಕಾರಣಭಾವವನ್ನು ಹೇಳಿದ್ದು ಈ ರೀತಿಯಾಗಿ ಅಲ್ಲ.

ಕಿಂತು 'ಅ' ಎಂಬ ಪ್ರಸಾದದಿಂದ 'ಆ' ಎಂಬ ಆಧಿಕ್ಯಜ್ಞಾನದ ಉತ್ಪತ್ತಿಯಾಗಿದೆ. 'ಆ' ಎಂಬ ಆಧಿಕ್ಯಜ್ಞಾನದಿಂದ 'ಅ' ಎಂಬ ಪ್ರಸಾದವು ಉತ್ಪನ್ನವಾಗುವುದಿಲ್ಲ. ಕಿಂತು 'ಇ' ಎಂಬ ಪ್ರಸಾದವು ಉತ್ಪನ್ನವಾಗುತ್ತದೆ. 'ಇ' ಎಂಬ ಪ್ರಸಾದವು 'ಈ' ಎಂಬ ಆಧಿಕ್ಯಜ್ಞಾನಕ್ಕೆ ಕಾರಣವಾಗುತ್ತದೆ. ಹೀಗೆ ಕಾರ್ಯಕಾರಣವಾಗುವ ಪ್ರಸಾದ ಮತ್ತು ಆಧಿಕ್ಯಜ್ಞಾನದಲ್ಲಿ ವ್ಯಕ್ತಿಭೇದವನ್ನು ಅಂಗೀಕರಿಸಿದ್ದರಿಂದಾಗಿ ಅನ್ಯೋನ್ಯಾಶ್ರಯವನ್ನು ಸರ್ವಥಾ ಶಂಕಿಸಲು ಬರುವದಿಲ್ಲ. ಪರಮಾತ್ಮನ ಪ್ರಸಾದದ ಮತ್ತು ಆಧಿಕ್ಯಜ್ಞಾನದ ಅಭಿವೃದ್ಧಿಯು ಜೀವನ ಸಾಧನೆಗೆ ಅನುಗುಣವಾಗಿ ಮುಕ್ತಿಯಾಗುವವರೆಗೆ ಆಗುತ್ತಲೇ ಇರುತ್ತದೆ.

ಪೂರ್ವದಲ್ಲಿ ಆಧಿಕ್ಯಜ್ಞಾನವಿಲ್ಲದಿದ್ದರೂ ಭಗವತ್ಪ್ರಸಾದದಿಂದ ಆಧಿಕ್ಯಜ್ಞಾನ ಬರಬಹುದೇ ? ಎಂಬ ಪ್ರಶ್ನೆ ಬರುತ್ತದೆ. ಆದರೆ ಹೀಗಾಗಲು ಸಾಧ್ಯವಿಲ್ಲ. ಮೊದಲು ಆಧಿಕ್ಯಜ್ಞಾನವಿದ್ದರೆ ಮಾತ್ರ ಪಶ್ಚಾದ್ಭಾವಿಯಾದ ಆಧಿಕ್ಯಜ್ಞಾನಕ್ಕೆ ಭಗವತ್ಪ್ರಸಾದ ಕಾರಣವಾಗುತ್ತದೆ. ಈ ಭಗವತ್ಪ್ರಸಾದವು ಆಧಿಕ್ಯಜ್ಞಾನದಿಂದ ಸಾಧ್ಯವಾಗಿದೆಯಾದ್ದರಿಂದ ಪೂರ್ವದಲ್ಲಿ ಆಧಿಕ್ಯಜ್ಞಾನ ಅಗತ್ಯವಾಗಿ ಇರಲೇಬೇಕು. ಆ ಜ್ಞಾನವು ಕೂಡಾ ಭಗವತ್ಪ್ರಸಾದಸಾಧ್ಯವಾಗಿದೆ. ಈ ಕಾರ್ಯಕಾರಣಭಾವ ಅನಾದಿಯಾಗಿದೆ.

ಯೋಗ್ಯರಾದ ಹಲವರಿಗೆ ಪೂರ್ವದಲ್ಲಿ ಆಧಿಕ್ಯಜ್ಞಾನದ ಉಪಲಬ್ಧಿಯಾಗುವದಿಲ್ಲ. ಪಶ್ಚಾತ್ ಆಧಿಕ್ಯಜ್ಞಾನದ ಪ್ರಾಪ್ತಿಯು ಅನುಭವಸಿದ್ಧವಾಗುತ್ತದೆ ? ಎಂಬ ಮತ್ತೊಂದು ಪ್ರಶ್ನೆ ಬರುತ್ತದೆ. ಸತ್ಯ. ಹೀಗೆ ಕೆಲವರಿಗೆ ಆಗಬಹುದು. ತನ್ನ ಪ್ರಾರಬ್ಧದಿಂದ ಈ ರೀತಿಯಾದ ಆಧಿಕ್ಯ-ಜ್ಞಾನದ ಅನುಪಲಬ್ಧಿಯಾಗಬಹುದೇ ಹೊರತು ಪೂರ್ವದಲ್ಲಿ ಇಲ್ಲದಿರುವ ಆಧಿಕ್ಯಜ್ಞಾನದ ಪ್ರಾಪ್ತಿಯಾಗಲು ಸಾಧ್ಯವೇ ಇಲ್ಲ. ಹಾಗೆ ಹೇಳುವದು ಶಾಸ್ತ್ರವಿರುದ್ಧವಾಗುತ್ತದೆ. ॥೨.೩.೧೩॥

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥೨.೩.೧೪॥

ಸಾಧಕನಾಗಿರುವ ಜೀವನು ಅಂತಃಕರಣವೃತ್ತಿಯಾಗಿರುವ ಸಕಲಕಾಮನೆಗಳನ್ನು ಪೂರ್ಣಗೊಳಿಸುತ್ತಾ ಇರುವ ತನಕ ಮರ್ತ್ಯನಾಗಿಯೇ ಇರುತ್ತಾನೆ. ಯಾವಾಗ ಸಕಲಕಾಮನೆಗಳನ್ನು ಪರಿತ್ಯಜಿಸುತ್ತಾನೆಯೋ ಆವಾಗ ಅವನು ಅಮರ್ತ್ಯನಾಗುತ್ತಾನೆ. ಮರಣರಹಿತನಾಗುತ್ತಾನೆ. ಭಗವಂತನ ಲೋಕಗಳನ್ನು ಅವನು ಪಡೆಯುತ್ತಾನೆ. ಅಲ್ಲಿ ಪರಮಾತ್ಮನನ್ನು ಪಡೆದು ಸುಖಿಯಾಗಿರುತ್ತಾನೆ.

**ವೇದೇಶೀಯವಿಶೇಷ-** ಇಲ್ಲಿ ''ಯದಾ ಸರ್ವೇ ಪ್ರಮುಚ್ಯಂತೇ'' ಎಂಬ ಮಾತಿನಿಂದ ಸಕಲಕಾಮನಾತ್ಯಾಗವು ಹೇಳಿದಂತೆ ತೋರುತ್ತದೆ. ಇದು ಸರಿಯಲ್ಲ. ಮೋಕ್ಷದಲ್ಲಿ ಸರ್ವಕಾಮಗಳ ಅವಾಪ್ತಿಯಾಗುತ್ತದೆ ಎಂದು ಹೇಳುವ ಶ್ರುತಿಯಿಂದ ಈ ಮಾತು ವಿರುದ್ಧವಾಗುತ್ತದೆ. ಆದ್ದರಿಂದ ಶ್ರೀಮದಾಚಾರ್ಯರು ಹೇಳುವ ಈ ಪರಿಹಾರವನ್ನು ತಿಳಿದುಕೊಳ್ಳಬೇಕು.

ಪರಮಾತ್ಮನ ಪ್ರಸಾದದಿಂದ ಜಡವಾದ ಅಂತಃಕರಣದಲ್ಲಿರುವ ಕಾಮನೆಗಳನ್ನು ಸಾಧಕನಾದವನು ಪರಿಹರಿಸಿಕೊಳ್ಳುತ್ತಾನೆ. ಈ ವಿಷಯವನ್ನು ತಿಳಿಸುವದಕ್ಕಾಗಿಯೇ ಇಲ್ಲಿ ''ಹೃದಿ ಸ್ಥಿತಾಃ'' ಎಂಬ ವಿಶೇಷಣವಿರುತ್ತದೆ. ಈ ಅರ್ಥವನ್ನು ಮಾಡದೇ ಹೋದರೆ ಈ ವಿಶೇಷಣ ವ್ಯರ್ಥವಾಗುತ್ತದೆ. ಹೀಗಾಗಿ ಸರ್ವಕಾಮಮೋಕ್ಷಶ್ರುತಿ ಜಡಕಾಮನಾವಿಷಯಕ-ವಾಗಿದೆ. ಚಿದಾತ್ಮಕವಾದ ಕಾಮನೆಗಳ ಅಭಿವ್ಯಕ್ತಿ ಮುಕ್ತಿಯಲ್ಲಿ ಆಗುತ್ತದೆ ಎಂದು ಸರ್ವಕಾಮಾವಾಪ್ತಿಶ್ರುತಿಯ ಅಭಿಪ್ರಾಯವಾಗಿದೆ. ಆದ್ದರಿಂದ ಸರ್ವಕಾಮಮೋಕ್ಷಶ್ರುತಿಗೆ ಸರ್ವಕಾಮಾವಾಪ್ತಿಶ್ರುತಿಯು ಬಾಧಕವಾಗುವದಿಲ್ಲವೆಂದು ತಿಳಿಯಬೇಕು. ಈ ವಿಷಯವನ್ನು ಮಹಾವಾರಾಹವಚನವು ತಿಳಿಸುತ್ತದೆ. ॥೨.೩.೧೪॥

ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ ।
ಅಥ ಮರ್ತ್ಯೋಽಮೃತೋ ಭವತ್ಯೇತಾವದನುಶಾಸನಮ್ ॥೧೫॥

ಹಾರ್ದಕಾಮನೆಗಳ ಪರಿತ್ಯಾಗ ಯಾವಾಗ ಆಗುತ್ತದೆ ಎಂಬುದನ್ನು ಈ ಮಂತ್ರ ತಿಳಿಸುತ್ತದೆ.

ಹೃದಯಸ್ಥಿತವಾದ ಕಾಮನೆಗಳಿಗೆ ಕಾರಣವಾದದ್ದು ಅವಿದ್ಯಾ, ಅಹಂಕಾರ ಮತ್ತು ಕರ್ಮಗಳು. ಇವು ಹೃದಯಗ್ರಂಥಿಗಳಾಗಿವೆ. ಇವುಗಳ ಪ್ರಹಾಣ ಅರ್ಥಾತ್ ಪರಿತ್ಯಾಗ ಯಾವಾಗ ಆಗುತ್ತದೋ ಆವಾಗಲೇ ಸರ್ವಕಾಮನೆಗಳ ತ್ಯಾಗವಾಗುತ್ತದೆ. ಕಾಮಗಳನ್ನು ಪರಿತ್ಯಜಿಸಿದವನು ಮರಣಾತೀತನಾಗುತ್ತಾನೆ.

**ಏತಾವದನುಶಾಸನಮ್**

ಶಾಸ್ತ್ರ ಹೇಳುವ ವಿಷಯವೇ ಇಷ್ಟು ಎಂದು ಭಾವಿಸಬಾರದು. ಹಾಗೆ ತಿಳಿದರೆ ಇತರ ಶಾಸ್ತ್ರಗಳು ವ್ಯರ್ಥವೆಂದಾಗುತ್ತವೆ. ಆದ್ದರಿಂದ ಈ ಮಾತಿನ ಅರ್ಥವನ್ನು ಹೀಗೆ ತಿಳಿಯಬೇಕು.

ಈ ಮಿಥ್ಯಾಜ್ಞಾನಗ್ರಂಥಿಯ ನಿರಾಸಕ್ಕಾಗಿಯೇ ನಿಷ್ಕಾಮಕರ್ಮ-ಶ್ರವಣ-ಮನನ-ಧ್ಯಾನಾದಿಗಳನ್ನು ಕರ್ತವ್ಯವೆಂದು ಪ್ರತಿಪಾದನೆ ಮಾಡುವ ಶಾಸ್ತ್ರ ಇದ್ದದ್ದು. ಅರ್ಥಾತ್ ನಿಷ್ಕಾಮಕರ್ಮಾದಿಗಳ ಆಚರಣೆಯ ಫಲದಿಂದ ಮಿಥ್ಯಾಜ್ಞಾನಗ್ರಂಥಿಯ ನಿರಾಸವಾಗುತ್ತದೆಂದು ತಿಳಿಯಬೇಕು.

**ಶತಂ ಚೈಕಾ ಚ ಹೃದಯಸ್ಯ ನಾಡ್ಯ-**
**ಸ್ತಾಸಾಂ ಮೂರ್ಧಾನಮಭಿನಿಃಸೃತೈಕಾ ।**
**ತಯೋರ್ಧ್ವಮಾಯನ್ನಮೃತತ್ವಮೇತಿ**
**ವಿಷ್ವಙ್ ಅನ್ಯಾ ಉತ್ಕ್ರಮಣೇ ಭವಂತಿ ॥೨.೩.೧೬॥**

ಇಲ್ಲಿಯವರೆಗೆ ಮೋಕ್ಷದ ವಿಷಯವನ್ನು ತಿಳಿಸುವ ಬ್ರಹ್ಮವಿದ್ಯೆಯನ್ನು ನಿರೂಪಣೆ ಮಾಡಿ ಜ್ಞಾನಿಯಾದವನು ಚರಮದೇಹದಿಂದ ನಿಷ್ಕ್ರಮಣಮಾಡುವ ಪ್ರಕಾರ ಹೇಗೆ ಎಂಬುದನ್ನು ತಿಳಿಸುತ್ತಿದ್ದಾರೆ.

ಹೃದಯಕ್ಕೆ ಸಂಬದ್ಧವಾಗಿರುವ ನಾಡಿಗಳು ನೂರ ಒಂದು. ಅವುಗಳ ಮಧ್ಯದಲ್ಲಿ ಒಂದು ಪ್ರಧಾನವಾದ ನಾಡಿಯು ಹೃದಯವನ್ನು ಪ್ರಾರಂಭಿಸಿ ಶಿರಸ್ಸಿನ ವರೆಗೆ ಇರುತ್ತದೆ. ಇದುವೇ ಬ್ರಹ್ಮನಾಡಿ. ಸುಷುಮ್ನಾನಾಡಿ. ಈ ನಾಡಿಯಿಂದ ಜೀವನು ಉತ್ಕ್ರಮಣಮಾಡಿ ಅರ್ಚಿರಾದಿ ಮಾರ್ಗದಿಂದ ಊರ್ಧ್ವಲೋಕಕ್ಕೆ ಹೋಗುತ್ತಾನೆ. ಲಿಂಗದೇಹಭಂಗವಾದಮೇಲೆ ಮುಕ್ತಿಯನ್ನು ಪಡೆಯುತ್ತಾನೆ. ಇದಕ್ಕೆಲ್ಲ ಪರಮಾತ್ಮನ ಅನುಗ್ರಹ ಅಗತ್ಯವಾಗಿದೆ. ಆದ್ದರಿಂದ ಪ್ರಾಣಪ್ರಯಾಣಸಮಯದಲ್ಲಿ ಸುಷುಮ್ನಾಮಾರ್ಗವು ಜ್ಞಾನಿಗಳಿಗೆ ಧ್ಯೇಯವಾಗಿದೆ. ಉಳಿದ ನಾಡಿಗಳಿಂದ ಪ್ರಾಣದ ನಿಷ್ಕ್ರಮಣವಾದರೆ ಲೋಕಾಂತರಗಳಿಗೆ ಹೋಗಿ ಕರ್ಮಫಲವನ್ನು ಅನುಭವಿಸುತ್ತಾನೆ. ಮತ್ತೆ ಭೂಲೋಕದಲ್ಲಿಯೇ ಜನಿಸುತ್ತಾನೆ.

**ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ**
**ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ।**
**ತಂ ಸ್ವಾಚ್ಛರೀರಾತ್ ಪ್ರವೃಹೇತ್ ಮುಂಜಾದಿವೇಷೀಕಾಂ ಧೈರ್ಯೇಣ ।**
**ತಂ ವಿದ್ಯಾತ್ ಶುಕ್ರಮಮೃತಂ ತಂ ವಿದ್ಯಾತ್ ಶುಕ್ರಮಮೃತಮಿತಿ ॥೧೭॥**

''ಅನನ್ಯಪ್ರೋಕ್ತೇ ಗತಿರತ್ರ ನಾಽಸ್ತಿ'' ಎಂಬಲ್ಲಿ ನಿರೂಪಿತವಾದ ಭೇದಜ್ಞಾನವೇ ಅಪವರ್ಗಕ್ಕೆ ಸಾಧನವಾಗಿದೆ ಎಂಬುದನ್ನು ಈ ಮಂತ್ರ ತಿಳಿಸುತ್ತದೆ.

ಅಂತಃಪ್ರೇರಕನಾದ ಪರಮಾತ್ಮ ಜೀವದೇಹಾಂಗುಷ್ಠ-ಜೀವಾಂಗುಷ್ಠಪರಿಮಿತನಾಗಿ ಜೀವರ ಬಾಹ್ಯಶರೀರದಲ್ಲಿ ಸ್ವರೂಪದೇಹದಲ್ಲಿ ಸುಖವಾಗಿ ಯಾವಾಗಲೂ ಸನ್ನಿಹಿತನಾಗಿದ್ದಾನೆ. ಅಂತಹ ಪರಮಾತ್ಮ ಶರೀರಸ್ಥಾನೀಯರಾದ ಜೀವರಿಂದ ಅತ್ಯಂತಭಿನ್ನನಾಗಿರುವನೆಂದು ತಿಳಿಯಬೇಕು. (ಭಗವಂತನಿಗೆ ಸಕಲಜೀವರಾಶಿಗಳೂ ಅಧೀನರಾಗಿದ್ದಾರೆ. ಆದ್ದರಿಂದ ಜೀವರಾಶಿಗಳು ಭಗವಂತನ ಶರೀರವೆನಿಸುತ್ತದೆ) ಜೀವಬ್ರಹ್ಮರ ಅಭೇದವನ್ನು ಪ್ರತಿಪಾದಿಸುವ ಪ್ರಮಾಣಾಭಾಸಗಳಿಂದ ಸರ್ವಥಾ ವಿಚಲಿತನಾಗಬಾರದು. ಮುಂಜ ಎಂಬ ಹುಲ್ಲಿನೊಳಗೆ ಒಂದು ಕಡ್ಡಿ ಇರುತ್ತದೆ. ಅದು ಮುಂಜದಿಂದ ಭಿನ್ನವಾಗಿಯೇ ಇರುತ್ತದೆ. ಅದನ್ನು ಪ್ರತ್ಯೇಕಿಸಲು ಬುದ್ಧಿವಂತಿಕೆ ಬೇಕು. ಹಾಗೆ ಜೀವರೊಳಗೆ ಭಗವಂತನಿದ್ದಾನೆ. ಆದರೆ ಮುಂಜದೊಳಗಿನ ಇಷೀಕದಂತೆ ಭಿನ್ನನಾಗಿದ್ದಾನೆ ಎಂದು ಭಾವಿಸಬೇಕು. ಯುಕ್ತಿಗಳಿಂದ ಆ ಜ್ಞಾನವನ್ನು ದೃಢಪಡಿಸಿಕೊಳ್ಳಬೇಕು. ಜೀವರಲ್ಲಿ ಇಲ್ಲದಿರುವ ವಿಲಕ್ಷಣವಾದ ಗುಣಗಳಿಂದ ಭಗವಂತನ ಮಹಿಮೆ ಅಪಾರವೆಂಬುದಾಗಿ ಮನಗಾಣಬೇಕು. ಭಗವಂತ ಶೋಕಾದಿದೋಷ-ರಹಿತನಾದ ಕಾರಣ ಶುಕ್ರನಾಗಿದ್ದಾನೆ. ಜೀವ ಶೋಕಸಹಿತನಾಗಿದ್ದಾನೆ. ಭಗವಂತ ನಿತ್ಯಮುಕ್ತನಾಗಿದ್ದಾನೆ. ಜೀವ ಸಂಸಾರಿಯಾಗಿದ್ದಾನೆ. ಹೀಗೆ ಪರಸ್ಪರ ವಿರುದ್ಧಧರ್ಮಗಳಿಗೆ ಆಶ್ರಯರಾದುದರಿಂದ ಪರಮಾತ್ಮ ಜೀವರಿಂದ ಭಿನ್ನನಾಗಿರುವನೆಂದು ದೃಢಪಡಿಸಿಕೊಳ್ಳಬೇಕು. ಈ ವಿಷಯ ಔಪಚಾರಿಕವಲ್ಲ. ವಾಸ್ತವವಾಗಿದೆ. ಇದನ್ನು ತಿಳಿಸುವುದಕ್ಕಾಗಿಯೇ ಶ್ರುತಿಯು ಭಗವಂತನ ದೋಷರಾಹಿತ್ಯವನ್ನು ನಿತ್ಯಮುಕ್ತತ್ವವನ್ನು "ತಂ ವಿದ್ಯಾತ್ ಶುಕ್ರಮಮೃತಂ ತಂ ವಿದ್ಯಾತ್ ಶುಕ್ರಮಮೃತಮ್" ಎಂದು ಎರಡಾವರ್ತಿ ಹೇಳುತ್ತದೆ.

ಮೃತ್ಯುಪ್ರೋಕ್ತಾಂ ನಾಚಿಕೇತೋಽಥ ಲಬ್ಧ್ವಾ
ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಮ್ ।
ಬ್ರಹ್ಮ ಪ್ರಾಪ್ತೋ ವಿರಜೋಽಭೂತ್ ವಿಮೃತ್ಯುಃ
ಅನ್ಯೋಽಪ್ಯೇವಂ ಯೋ ವಿದಧ್ಯಾತ್ಮಮೇವ ॥೨.೩.೧೮॥

ಯಮದೇವರು ನಚಿಕೇತನಿಗೆ ಉಪದೇಶಮಾಡಿದ ಬ್ರಹ್ಮವಿದ್ಯೆಯನ್ನು ಅನುವಾದಮಾಡಿ ಬ್ರಹ್ಮವಿದ್ಯೆಯಲ್ಲಿ ಪರಿನಿಷ್ಠಿತನಾಗಿರುವ ನಚಿಕೇತನಿಗೆ ಫಲವನ್ನು ಹೇಳಿ ಬ್ರಹ್ಮವಿದ್ಯೆಯಲ್ಲಿ ಯಾರು ನಿಷ್ಠಿತರಾಗಿದ್ದಾರೋ ಅವರಿಗೂ ಫಲವನ್ನು ಹೇಳುತ್ತದೆ ಈ ಉಪನಿಷತ್.

ಮೃತ್ಯುನಾಮಕರಾದ ಯಮದೇವರಿಂದ ಉಪದಿಷ್ಟವಾದ ಈ ವಿದ್ಯೆಯನ್ನು ಮತ್ತು ಇಂದ್ರಿಯಧಾರಣಾದಿರೂಪವಾದ ಯೋಗವನ್ನು ಪಡೆದಿರುವ ನಚಿಕೇತನು ನಿರ್ದುಷ್ಟನಾದ. ಪರಬ್ರಹ್ಮನನ್ನು ಪಡೆದು ಮೃತ್ಯುರಹಿತನಾದ. ಹೀಗೆ ಯಾರು ಅಧಿಕಾತ್ಮನಾದ ಭಗವತ್ಸ್ವರೂಪವನ್ನು ಪೂರ್ವೋಕ್ತಪ್ರಕಾರ ತಿಳಿಯುತ್ತಾರೋ ಅವರು ಕೂಡಾ ಕರ್ಮಗಳ ಕಲ್ಮಶದಿಂದ ರಹಿತರಾಗಿ ಮುಕ್ತರಾಗುತ್ತಾರೆ.

ಪರಮಾತ್ಮ ಪ್ರಾಧಾನ್ಯೇನ ಅಗ್ನಿಷ್ಟೋಮದಿಂದ ಪೂಜ್ಯನಾಗಿದ್ದಾನೆ. ಮುಕ್ತಾಮುಕ್ತ-ನಿಯಾಮಕನಾಗಿದ್ದಾನೆ. ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾಗಿದ್ದಾನೆ. ಶೋಕಾದಿಸಕಲ-ದೋಷರಹಿತನಾಗಿದ್ದಾನೆ. ಆದ್ದರಿಂದ ವಿಷ್ಣುವೇ ಸರ್ವೋತ್ತಮ ಎಂಬುದು ಈ ಉಪನಿಷತ್ತಿನಿಂದ ಸಿದ್ಧವಾಗುತ್ತದೆ. ಹೀಗಾಗಿ ಭಗವದುತ್ಕರ್ಷದಲ್ಲಿಯೇ ಈ ಉಪನಿಷತ್ತಿಗೆ ಮಹಾತಾತ್ಪರ್ಯವಿದೆ ಎಂಬುದಾಗಿ ತಿಳಿಯಬೇಕು.

**ಸಹ ನಾವವತು ಸಹ ನೌ ಭುನಕ್ತು ಸಹ ವೀರ್ಯಂ ಕರವಾವಹೈ ।**
**ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ।**
**ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಪೂರ್ವದಲ್ಲಿ ಯಾವ ಪರಮಾತ್ಮ ಪ್ರಸ್ತುತನಾಗಿರುವನೋ ಆ ಪರಬ್ರಹ್ಮ ಗುರುಶಿಷ್ಯರಾದ ನಮ್ಮನ್ನು ಜ್ಞಾನದಾನಾದಿಗಳಿಂದ ರಕ್ಷಿಸಲಿ. ನಾವಿಬ್ಬರು ಕೂಡಿಯೇ ಸುಖವನ್ನು ಭೋಗಮಾಡುವಂತೆ ಮಾಡಲಿ. ಪರಬ್ರಹ್ಮನ ಪ್ರಾಪ್ತಿಗೆ ಕಾರಣವಾಗುವಂತಹ ಕರ್ಮಗಳನ್ನು ನಮ್ಮಿಂದ ಮಾಡಿಸಲಿ. ನಾವು ಮಾಡಿದ ಅಧ್ಯಯನ ತೇಜೋಮಯಬ್ರಹ್ಮವಿಷಯಕ-ವಾಗಿರಲಿ. ಬ್ರಹ್ಮಪ್ರಸಾದಕ್ಕೆ ಅದ್ವೇಷ್ಯರ ಜೊತೆ ದ್ವೇಷಮಾಡದಿರುವದು ಕಾರಣವಾಗುತ್ತದೆ. ಆದ್ದರಿಂದ ಅಂಥವರ ಜೊತೆ ಸರ್ವಥಾ ದ್ವೇಷಮಾಡುವಂತೆ ನಾವಿಬ್ಬರೂ ಆಗಬಾರದು. ಸುಖಜ್ಞಾನಾದಿಗುಣಗಣಪೂರ್ಣನಾದ ಪರಮಾತ್ಮನು ನಮಗೆ ದೊರಕಲಿ. ಈ ವಿಷಯದಲ್ಲಿ ವೇದಗಳಿಗೆ ಮಹಾತಾತ್ಪರ್ಯವಿದೆ. ಇದನ್ನು ತಿಳಿಸುವುದಕ್ಕಾಗಿ ಮೂರುಬಾರಿ ಈ ವಿಷಯವನ್ನು ಹೇಳಿದ್ದಾರೆ. ಅಥವಾ ಈ ವಿಷಯ ತ್ರಿಕಾಲದಲ್ಲಿ ಸತ್ಯವಾಗಿದೆ ಎಂಬುದನ್ನು ಹೇಳುವದಕ್ಕಾಗಿ ಮೂರುಬಾರಿ ಹೇಳಿದ್ದಾರೆಂದು ತಿಳಿಯಬೇಕು.

**ನಮೋ ಭಗವತೇ ತಸ್ಮೈ ವಿಷ್ಣವೇ ಪ್ರಭವಿಷ್ಣವೇ ।**
**ಯಸ್ಯಾಹಮಾಪ್ತ ಆಪ್ತೇಭ್ಯೋ ಯೋ ಮ ಆಪ್ತತಮಸ್ಸದಾ ॥**

ವಿಷ್ಣುವು ಷಡ್ಗುಣೈಶ್ವರ್ಯಪರಿಪೂರ್ಣನಾಗಿದ್ದಾನೆ. ಸೃಷ್ಟ್ಯಾದಿಗಳನ್ನು ಮಾಡುವುದು ಆತನ ಸ್ವಭಾವವಾಗಿದೆ. ಅದನ್ನು ಮಾಡುವುದರಿಂದ ಅವನಿಗೆ ಯಾವುದೇ ರೀತಿಯಾದ ಪ್ರಯೋಜನವಿರುವದಿಲ್ಲ. ಜೀವರ ಪ್ರಯೋಜನಕ್ಕಾಗಿ ಮಾತ್ರ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ. ಆ ಪರಮಾತ್ಮನಿಗೆ ನಾನು ಅತಿಶಯ ಆಪ್ತನಾಗಿದ್ದೇನೆ. ನನಗೂ ಅತಿಯಾದ ಆಪ್ತನು ಪರಮಾತ್ಮನೇ ಆಗಿದ್ದಾನೆ. ಅಂತಹ ನನಗೆ ಪ್ರತ್ಯಕ್ಷನಾಗಿರುವ ಪರಮಾತ್ಮನಿಗೆ ನಮಸ್ಕಾರಗಳು. ಅವನ ಪ್ರೀತಿಗಾಗಿಯೇ ಅವನ ಪ್ರೇರಣೆಯಿಂದಲೇ ನಾನು ಈ ಗ್ರಂಥವನ್ನು ರಚಿಸಿರುವೆನು. ಈ ಕರ್ಮದಿಂದ ಪರಮಾತ್ಮನು ಪ್ರೀತನಾಗಲಿ.

**॥ ಇತಿ ಶ್ರೀಕಾಠಕೋಪನಿಷದ್ಭಾಷ್ಯಂ ಸಂಪೂರ್ಣಮ್ ॥**

**॥ ಇತ್ಯಶೇಷಮತಿಮಂಗಲಮ್ ॥**

# उपनिषन्मन्त्राणां पादानुक्रमणिका

र

# भाष्योदाहृतप्रमाणानां श्लोकार्धानुक्रमणिका

'अ

आ



इ



उ



ऋ



ए

॥ श्रीकृष्णार्पणमस्तु ॥

